Photo by P. R. Shinde



ಬಹುಮಾನ
ಪಡೆದ ಶೀರ್ಷಿಕೆ

ಆವರಣದಲ್ಲಿ

ಕಳಿಸಿದವರು:
ಚನ್ನಬಸಪ್ಪ, ಗುರುಬಸಪ್ಪ

# ಬಹುಮಾನ ಪಡೆಯಿರಿ!

## ತಪ್ಪುಗಳನ್ನು ಕಂಡುಹಿಡಿಯಿರಿ

### ತಪ್ಪು ಎಲ್ಲಿದೆ ಗೊತ್ತೆ?

ಮುದ್ರಣ ಕಲೆಯನ್ನು ಕಲಿಯುತ್ತಿರುವ ಗೋವಿಂದನೆಂಬ ಹುಡುಗ ಬಹಳ ಕಷ್ಟಕ್ಕೀಡಾಗಿದ್ದಾನೆ. ಅವಸರವಾಗಿ ಬೇಕೆಂದು ಹೇಳಿದ ಪ್ರಯುಕ್ತ ಅವನು ಬೇಗ ಮುದ್ರಿಸಿಕೊಟ್ಟ "ಬಿನಾಕಾ" ಪಟ್ಟಿ ಮೇನೇಜರಿಗೆ ಬಹಳ ಸಿಟ್ಟನ್ನುಂಟು ಮಾಡಿದೆ. ಗೋವಿಂದನು ಬಹಳ ತಪ್ಪುಗಳನ್ನು ಮಾಡಿದ್ದಾನೆ.

ನೀವು ಗೋವಿಂದನಿಗೆ ಅವನ ತಪ್ಪುಗಳನ್ನು ತೋರಿಸಿಕೊಡಬಲ್ಲಿರಾ?

ಈ ಕೆಳಗೆ ತೋರಿಸಿರುವಂತೆ ಗೋವಿಂದನ ಕೆಲಸ ನಮೂನೆಯಲ್ಲಿ ಒಂದೊಂದು ತಪ್ಪಿನಮೇಲೂ ಒಂದೊಂದು ವರ್ತುಳವನ್ನು ಹಾಕಿ.



'TOOTHPASTE' 'GREAN'

ಎಷ್ಟು ತಪ್ಪುಗಳಿವೆಯೋ ಆ ಅಂಕಿಯನ್ನು ಎಂಟ್ರಿಫಾರಂಮೇಲೆ ಬರೆಯಿರಿ. ಆಕೃತಿಯಲ್ಲಾಗಲೀ ಬಣ್ಣದಲ್ಲಾಗಲೀ ತಪ್ಪುಗಳಿದ್ದರೆ ತಿದ್ದಬೇಕಾಗಿಲ್ಲ.

### ಬಹುಮಾನದ ವಿವರಗಳು:

**1**ನೇ ಬಹುಮಾನ: *690* ರೂ. ಬೆಲೆ ಬಾಳುವ ಒಮೀಗಾ–ಕಾನ್ಸ್ಟಲೇಷನ್ ಕೈಗಡಿಯಾರ. (ಆಲ್‌ಪ್ರೂಫ್ ಸೆಲ್ಫ್‌ವೈಂಡಿಂಗ್ ಕ್ರೋನೋಮೀಟರ್)

**2**ನೇ ಬಹುಮಾನ: *500* ರೂ. ಬೆಲೆಬಾಳುವ ಒಮೀಗಾ–ಸೀಮಾಸ್ಟರ್–ಕ್ಯಾಲೆಂಡರ್ ಕೈಗಡಿಯಾರ. (ಸೆಲ್ಫ್‌ವೈಂಡಿಂಗ್, ಡೇಟು ಸಹ ತೋರಿಸುತ್ತದೆ)

**3**ನೇ ಬಹುಮಾನ: *450* ರೂ. ಬೆಲೆ ಬಾಳುವ ಒಮೀಗಾ–ಸೀಮಾಸ್ಟರ್ ಎಂಬ ಸೂಪರ್ ವಾಟರ್‌ಟೈಟ್ ಸೆಲ್ಫ್‌ವೈಂಡಿಂಗ್ ಕೈಗಡಿಯಾರ. *30,000* ವಿಮಾನ ಸಂಚಾಲಕರು ಉಪಯೋಗಿಸುತ್ತಿರುವ ಅಕ್ಯುರೇಟ್ ಟೈಂ ತೋರಿಸತಕ್ಕದ್ದು.

ತರುವಾಯ **12** ಬಹುಮಾನಗಳು: ಆಗ್ಫಾಕ್ಲಾಕ್ ಕ್ಯಾಮೆರಾ *29* ರೂ. ಬೆಲೆಯುಳ್ಳದ್ದು.

ತರುವಾಯ **12** ಬಹುಮಾನಗಳು: ಬಾಡ್‌ಮಿಂಟನ್ನು ಬ್ಯಾಟು ಅಥವಾ ಹಾಕಿ ಸ್ಟಿಕ್ಕು (*10* ರೂ, ಬೆಲೆ ಉಳ್ಳದ್ದು)

ತರುವಾಯ **12** ಬಹುಮಾನಗಳು: ಪೆಯಿಂಟ್ ಬಾಕ್ಸುಗಳು (ಬ್ರಷ್ಷುಸಹ) (ರೂ. *7/8*– ಬೆಲೆ ಉಳ್ಳದ್ದು)

ತರುವಾಯ **500** ಬಹುಮಾನಗಳು: "ಪೋಲಿಟಿಯ್ನರ್" ಕ್ಯಾಂಪಿಂಗ್ ವಾಟರ್ ಬಾಟಲ್‌ಗಳು. (*5* ರೂ. ಬೆಲೆ ಉಳ್ಳದ್ದು)

ತರುವಾಯ **5000** ಬಹುಮಾನಗಳು: "ದಿ ಟ್ರೆಷರ್ ಹಂಟ್" ಎಂಬ ನವೀನ ಆಟಕ್ಕೆ ಬೇಕಾದ ಸಾಮುಗ್ರಿಗಳು. ಮತ್ತು ಎಲ್ಲಾ ಸ್ಪರ್ಧಿಗಳಿಗೂ ***1955***ನೇ ಬಿನಾಕಾ ಸ್ಕೂಲ್ ಟೈಂಟೇಬಲ್.



# ಬಿನಾಕಾ ಟೂತ್‌ಪೇಸ್ಟ್‌ರವರ ಉಚಿತ ಸ್ಪರ್ಧೆ

ಬರೇ ಹದಿನಾಲ್ಕು ವರ್ಷದವರೆಗಿನ ಮಕ್ಕಳಿಗೆ ಮಾತ್ರ:

## ಯಾರು ಗೆಲ್ಲುತ್ತಾರೆ ಗೊತ್ತೆ?

ಗೋವಿಂದನ ಎಲ್ಲಾ ತಪ್ಪುಗಳನ್ನು ಗೊತ್ತುಹಚ್ಚಿ, ಪ್ರತಿ ತಪ್ಪುಗಳ ಮೇಲೂ ಈ ಚಿತ್ರದಲ್ಲಿ ಗೋಲಾಕಾರ ವನ್ನು ಹಾಕಿ, ಒಟ್ಟು ತಪ್ಪುಗಳ ಸಂಖ್ಯೆಯನ್ನು ಎಂಟ್ರಿಕೂಪನಿನಮೇಲೆ ಬರೆದ ಸ್ಪರ್ಧೆಕಾರರು ಮಾತ್ರ ಈ ಸ್ಪರ್ಧೆಯನ್ನು ಗೆಲ್ಲುವರು.

ಒಂದುವೇಳೆ ಗೆದ್ದವರ ಸಂಖ್ಯೆಯು ಒಂದಕ್ಕಿಂತ ಹೆಚ್ಚಿದ್ದರೆ, ಅವರು ಕಟ್ಟಿ ಕಳುಹಿಸಿದ ಬಿನಾಕಾದ ಮೆಚ್ಚುಗೆಯ ಗೀತೆಯ ಶ್ರೇಷ್ಠತೆಯಂತೆ ಬಹುಮಾನಿಸಲ್ಪಡುವರು.

ಪ್ರತಿಯೊಂದು ಸ್ಪರ್ಧೆಯೊಂದಿಗೆ ಬರಿ ಒಂದು ಗೀತೆ ಮಾತ್ರ ಸ್ವೀಕರಿಸಲ್ಪಡುವುದು. ಈ ಗೀತೆಯು (ಅಥವಾ ವಾಕ್ಯವು) *12* ಶಬ್ದಗಳಿಂದ ಹೆಚ್ಚಾಗಿರಕೂಡದು. ಅಲ್ಲದೆ ಇದು ಹಲ್ಲುಗಳ ಸಂರಕ್ಷಣೆಗೆ ಸಂಬಂಧಿಸಿರಬೇಕು. ಉದಾಹರಣೆಗಾಗಿ: "ರಾತ್ರಿ, ಹಗಲು ತೊಳೆಯಿರಿ ನಿಮ್ಮ ಹಲ್ಲುಗಳನ್ನು; ಶುಭ್ರವಾಗಿ, ಆರೋಗ್ಯ ವಾಗಿ ಇಡಲು ಅದನ್ನು."

ಈ ಸ್ಪರ್ಧೆಗೆ ಕಳುಹಿಸಲ್ಪಟ್ಟ ಪ್ರತಿಯೊಂದು ಗೀತೆಯ ಸಂಪೂರ್ಣ ಅಧಿಕಾರವು ಬಿನಾಕಾ ಫಾರ್ಮಾ ಲಿಮಿಟೆಡ್‌ರವರಿಗೆ ಸೇರಿರುತ್ತದೆ. ಅಲ್ಲದೆ ಇವುಗಳನ್ನು ತಮ್ಮ ಪ್ರಕಟಣೆಗಳಲ್ಲಿ ಉಪಯೋಗಿಸುವ ಅಧಿಕಾರ ವನ್ನು ಕೂಡಾ ಅವರು ಪಡೆದಿರುತ್ತಾರೆ.

ಎಲ್ಲಾ ಗೆದ್ದ ಸ್ಪರ್ಧೆಕಾರರಿಗೆ ಪತ್ರಮುಖೇನ ತಿಳಿಸಲಾಗುವುದು, ಇದರ ಕುರಿತು ಇನ್ನಿತರ ಪತ್ರವ್ಯವ ಹಾರಗಳಿಗೆ ಎಡೆಕೊಡಲಾಗುವುದಿಲ್ಲ.

ಇದರ ಕುರಿತು ನಮ್ಮ ತೀರ್ಮಾನ ಕೊನೆಯದ್ದಾಗಿರುತ್ತದೆ.

ಬಿನಾಕಾ ಕಂಪೆನಿಯ ನೌಕರರ ಮಕ್ಕಳಿಗೆ ಈ ಸ್ಪರ್ಧೆಯಲ್ಲಿ ಭಾಗವಹಿಸಲು ಸಂಪೂರ್ಣ ನಿಷೇಧವಿದೆ.

ಈ ಚುಕ್ಕೆಗಳಿರುವ ಗೆರೆಯಮೇಲೆ ನೇರವಾಗಿ ಕತ್ತರಿಸಿರಿ.

**ENTRY FORM — Cut along dotted line**

ಇದೇ ಗೋವಿಂದನ ಮುದ್ರಿತ ಚಿತ್ರ

with chlorophyll

CIBA
Trade marks
registered

The daily use of

**BINACA prevents tarter formation**

**Strengtens delicate gums**

Valuable for the preservation of Children teeth

**Keeps the mouth fresh and the teeth white**

**THE SULPHO-RICINOLEATE TOOTHPASTE**

**BINACA GREEN**

Reg.T.M.

ಆಖೈರು ತಾರೀಖು **15 - 4 - 55**

ತಪ್ಪುಗಳ ಸಂಖ್ಯೆ ..........

ಗೀತೆ ..........

..........

ಹೆಸರು ..........

ವಿಳಾಸ ..........

..........

ಪೋಸ್ಟ್ ಮಾಡಬೇಕಾದ ವಿಳಾಸ: **ಸೀಬಾ,** P. B. 1123. **(ಸ್ಪರ್ಧೆ) ಬೊಂಬಾಯಿ-1.**

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟು ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್-26.

## ಈಗ ಯಶಸ್ವಿಯಾಗಿ ಪ್ರದರ್ಶಿತವಾಗುತ್ತಿದೆ!

ಬೆಂಗಳೂರು: **ಶಾರದ, - ಸೆಂಟ್ರಲ್.** ಮೈಸೂರು: ರಾಜ್‌ಕಮಲ್

ಮತ್ತು ಸಂಸ್ಥಾನದ ಇತರ ಪ್ರಮುಖ ಕೇಂದ್ರಗಳಲ್ಲಿ



ಮಹಾತ್ಮ ರವರ

# ಗಂಧರ್ವಕನ್ಯೆ

ಕನ್ನಡ

**ರಾಜಾಸುಲೋಚನ..ರೇವತಿ..ಹರಿಣಿ**

– *ಸ್ಟುಡಿಯೋ..ಫಿಲಂಸೆಂಟರ್, ರೇವತಿ. ಮದರಾಸು*

ನಿರ್ದೇಶನ......ಶಂಕರಸಿಂಗ್

---

**ಮೇ ತಿಂಗಳಿನಲ್ಲಿ ಬಿಡುಗಡೆ !**

ಮಹಾತ್ಮಾರವರ

# ಆಶಾಢಭೂತಿ

(ಕನ್ನಡ)

ಹಾಸ್ಯಮಯ ಸಾಮಾಜಿಕ ಚಿತ್ರ.

**A PRAKASH RELEASE**



## ಡೋಂಗರೇ ಬಾಲಾಮೃತ

+

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

## ಜೀವನೋಪಾಯದ ಪುಸ್ತಕಗಳು

ಎಲೆಕ್ಟ್ರಿಕ್ ಮತ್ತು ರೇಡಿಯೋ ಗೈಡ್ (2 ಭಾಗಗಳು) ರೂ. 15/-ಕ್ಕೆ ನಿಮಗೆ ನೀವೇ ರೇಡಿಯೋ ನಿರ್ಮಿಸಿಕೊಳ್ಳಿರಿ. ವಿದ್ಯುತ್ತಿನ ಅಗತ್ಯವಿಲ್ಲ. ರೇಡಿಯೋ ದುರಸ್ತಿ, ಎಲೆಕ್ಟ್ರಿಸಿಟಿಯನ್ನು ಕುರಿತು ಸಮಸ್ತವನ್ನೂ ಕಲಿತುಕೊಳ್ಳಲಿಕ್ಕೆ ರೂ. 4/-; ಭಾಷೆಗಳ ಶಿಕ್ಷಕ: ತನಗೆತಾನೇ ಚೈನೀಸ್, ಜಾಪಾನೀಸ್, ಬರ್ಮೀಸ್, ರಷ್ಯನ್, ಜರ್ಮನ್, ಫ್ರೆಂಚ್ ಮೊದಲಾದ 14 ಭಾಷೆಗಳನ್ನು ಕಲಿಸುವಂತಹುದು ರೂ. 4/-; ಫೋಟೋಗ್ರಾಫೀ ಟೀಚರ್ ರೂ. 3/-; ಹೊಲಿಗೆ ಕಟಿಂಗುಗಳು (ಚಿತ್ರಗಳೊಂದಿಗೆ) ರೂ. 4/-; ಸೋಪುಗಳ ತಯಾರಿಕೆ ರೂ. 3/-; ಅತ್ತರುಗಳ ತಯಾರಿಕೆ ರೂ. 3/-; ಗಾಯನ ಮತ್ತು ನೃತ್ಯ ರೂ. 3/-; ಡ್ರಾಯಿಂಗ್ ಮತ್ತು ಪೈಟಿಂಗುಗಳು ರೂ. 3/-; ವಾಚುಗಳು ರಿಪೇರಿ ರೂ. 3/-; ಎಂಬ್ರಾಯ್ಡರಿ ಡಿಜೈನುಗಳ ಪುಸ್ತಕ (ನೂರಾರು ಡಿಜೈನುಗಳುಳ್ಳದ್ದು) ರೂ. 3/- ವಿ. ಪಿ. ಪಿ. ಚಾರ್ಜು 0-12-0 ಪ್ರತ್ಯೇಕ.

ಪತ್ರವ್ಯವಹಾರ ಇಂಗ್ಲೀಷಿನಲ್ಲಿಯೇ ಮಾಡಬೇಕು.

**SULEKHA BOOK DEPOT**
P. O. 13. ALIGARH (U.P.) India.



## ಮನೆಗಳಿಗೆ ಉಪಯೋಗವಾದ ಸಿನಿಮಾಯಂತ್ರ

ಈ ಯಂತ್ರದಮೂಲಕ ಮನೆಯಲ್ಲಿಯೇ ಬಂಧು ಮಿತ್ರರೊಂದಿಗೆ ಕುಳಿತುಕೊಂಡು ನಿಜವಾದ ಸಿನಿಮಾದಿಂದ ಆಗುವ ಆನಂದವನ್ನ ಅನುಭವಿಸಿರಿ. 35 ಮಿ. ಮಿ. ಫಿಲಿಮ್ ಇದಕ್ಕೆ ಉಪಯೋಗಿಸಬಹುದು. ಇದನ್ನು ಬ್ಯಾಟರಿ ಅಥವಾ ಎಲೆಕ್ಟ್ರಿಸಿಟಿ (AC ಯಾ DC) ಯ ಸಹಾಯದಿಂದ ನಡೆಯಿಸಬಹುದು. ಸ್ಲೈಡುಗಳು, ಕಾರ್ಟೂನುಗಳು ಮತ್ತು ವಾರ್ತಾ ಚಿತ್ರಗಳನ್ನು ಕೂಡಾ ಇದರಿಂದ ತೋರಿಸಬಹುದು. ಈ ಯಂತ್ರದೊಂದಿಗೆ 10 ಅಡಿಗಳ ಫಿಲಿಮ್ ಉಚಿತವಾಗಿ ಕೊಡಲ್ಪಡುತ್ತದೆ. ಇದರ ಕ್ರಯ ರೂ. 12/8- ವಿ. ಪಿ. ಪಿ. ಚಾರ್ಜು ರೂ. 3/- ಪ್ರತ್ಯೇಕ ಫಿಲಿಮ್ ಗಜ ಒಂದಕ್ಕೆ ಆಣೆ 8/-

ಪತ್ರವ್ಯವಹಾರವನ್ನು ಇಂಗ್ಲೀಷಿನಲ್ಲೆ ಮಾಡಿರಿ.

**SULEKHA TRADERS (C M) No. 13,**
ALIGARH (U. P.)

## ಆಟೋಮ್ಯಾಟಿಕ್ ಆರುತೋಟಾ ಪಿಸ್ತೋಲು

(ಇದಕ್ಕೆ ಲೈಸನ್ಸ್ ಬೇಕಾಗಿಲ್ಲ)



ಆರು ತೋಟಾಗಳಿಂದ ರಿಪೀಟರ್ ಡಯಲಿನೊಡನೆ ಸಜ್ಜಿತವಾಗಿರುವ ಈ ಅಮೆರಿಕನ್ ಮಾಡಲ್ ಪಿಸ್ತೋಲ್ ಕೊಂಡುಕೊಳ್ಳಿ. ಇದರ ಕಿಡಿಗಳ ಸಮೇತವಾದ ವಿಶೇಷ ಧ್ವನಿಯಿಂದ ದರೋಡೆಕಾರರೂ ಕ್ರೂರಜಂತುಗಳೂ ಹೆದರಿ ಓಡಬೇಕಾಗುತ್ತೆ. ನಾಟಕ, ಸಿನಿಮಾ ಸನ್ನಿವೇಶಗಳಿಗೆ ಬಹಳ ಉಪಯುಕ್ತ. ವಿರೋಧಿಗಳ ಕೈಗೆ ಸಿಕ್ಕಿಬಿದ್ದಾಗ ತಪ್ಪಿಸಿಕೊಳ್ಳುವ ಸಾಧನ.
ಬೆಲೆ ಒಂದಕ್ಕೆ ರೂ. 8-8-0 ವಿ. ಪಿ. ಛಾರ್ಜು ರೂ. 1-12-0. 12 ತೋಟಾಗಳು ಉಚಿತ. ಹೆಚ್ಚಿಗೆ ತೋಟಾ ಡಜನ್ ರೂ. 1-4-0 ಪಿಸ್ತೋಲ್ ಕೇಸು ಒಂದಕ್ಕೆ ರೂ. 2-8-0.

ಪತ್ರವ್ಯವಹಾರ ಇಂಗ್ಲೀಷಿನಲ್ಲೇ ಮಾಡಬೇಕು

**S. K. SAKSENA, RANGAMAHAL,**
ALIGARH. (U. P.)




# ಪರ್ಟುಸಿನ್

"ಟೆಷ್ನರ್"




60 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಪರ್ಟುಸಿನ್ ಎಲ್ಲಾ ತರದ ಕೆಮ್ಮುಗಳಿಂದಲೂ ಮತ್ತು ನಾಯಿಕೆಮ್ಮಿನಿಂದಲೂ ಬಳಲುತ್ತಿದ್ದ ಅಸಂಖ್ಯಾತ ಜನರಿಗೆ, ಅತಿ ಶೀಘ್ರವಾದ ಮತ್ತು ಅತಿ ಸುರಕ್ಷಿತವಾದ ಉಪಶಮನಕಾರಕ ಔಷಧಿಯಾಗಿ ಪರಿಗಣಿಸಲ್ಪಟ್ಟಿರುತ್ತದೆ. ಇಂದೇ ಪರ್ಟುಸಿನ್ ಪಡೆಯಿರಿ.

ಎಲ್ಲಾ ಕೆಮಿಸ್ಟ್ ಅಂಗಡಿಗಳಲ್ಲಿಯೂ ದೊರೆಯುವುದು.

ಇಟೆಫಾ ಲಿಮಿಟೆಡ್, ಷಾನ್, ಲೀಶಿನ್‌ಸ್ಟೀನ್, ಸ್ವಿಸ್ ಕಸ್ಟಮ್ ಮತ್ತು ಎಕನಾಮಿಕ್ ಟೆರಿಟೋರಿ, ಇವರ ಏರ್ಪಾಡಿನಿಂದ **ಇನ್‌ಫಾ ಲಿಮಿಟೆಡ್**, ಪೋಸ್ಟ್ ಬಾಕ್ಸ್ 1041, ಮುಂಬಯಿ - 1 ಇವರು ಭಾರತದಲ್ಲಿ ತಯಾರಿಸುತ್ತಿರುವರು.

ILY.7-KAN



## ಈ ಸಂಚಿಕೆಯಲ್ಲಿ



ಅಲ್ಲದೆ ಮಾಯಾಚಕ್ರ, ತುಂಡು ಪದ್ಯಗಳು, ಚುಟುಕಗಳು,
ಫೋಟೋ ಶೀರ್ಷಿಕೆಯ ಸ್ಪರ್ಧೆ, ಚಿತ್ರಕಥೆ ಎಲ್ಲಾ ಇವೆ.

## "ಚಂದಮಾಮ" ನಿಗೆ

## ಏಜಂಟರು ಬೇಕು

*

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **2-0-0** ಕಳುಹಿಸುತ್ತಾ ಇದ್ದರೆ ನಿಮಗೆ **7** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 0-10-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

**ಚಂದಮಾಮ ಪಬ್ಲಿಕೇಷನ್ಸ್**

ವಡಪಳನಿ : ಮದ್ರಾಸು - 26

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

---

ರಜೆಯ ಕಾಲವೆಂದರೆ ಎಲ್ಲರಿಗೂ ಬಹಳ ಉತ್ಸಾಹ. ಶಾಲೆಗೋ ಆಫೀಸಿಗೋ ಗಂಟೆಪ್ರಕಾರ ತಮ್ಮ ಕೆಲಸಗಳನ್ನು ಮುಗಿಸಿ ಚಟುವಟಿಕೆಯಿಂದಿರುವವರಲ್ಲಿ ಕೆಲವರು ಈಗ ತುಂಬ ಜಡರಾಗಿಬಿಡುವುದುಂಟು. ಬೆಳಗ್ಗೆ ಏಳುವಾಗಲೇ ಹೊತ್ತುಮಾಡಿ ಏಳುವುದರಿಂದಲೇ ಅವರ ಜಡತನ ಪ್ರಾರಂಭವಾಗುತ್ತದೆ. ಇನ್ನು ಕೆಲವರು ಹಾಳು ಹರಟೆಗಳಿಂದಲೂ, ಮಿತಿಮೀರಿ ಆಟಕೂಟಗಳಿಂದಲೂ ಅಮೂಲ್ಯವಾದ ರಜಾಕಾಲವನ್ನು ಹಾಳು ಮಾಡಿಕೊಳ್ಳುತ್ತಾರೆ. ರಜೆಯಲ್ಲಿಯೂ ಕಾಲಕ್ಕೆ ಅಮೂಲ್ಯವಾದ ಬೆಲೆಯುಂಟೆಂಬುದನ್ನು ಅರಿತು, ಅವರವರ ಕೆಲಸಗಳನ್ನು ಅವರವರೇ ಮಾಡಿಕೊಳ್ಳುತ್ತ, ಜೀವನದಲ್ಲಿ ಮೇಲೇರುವ ವಿಧಾನವನ್ನು ಕಲಿಯಬೇಕು. ವ್ಯಾವಹಾರಿಕ ಪಾಠಗಳನ್ನು ಕಲಿಯಲಿಕ್ಕೆ ರಜಾಕಾಲವೇ ಒಳ್ಳೆಯ ಕಾಲ.

ಏಪ್ರಿಲ್
೧೯೫೫



ಸಂಪುಟ ೧೪
ಸಂಚಿಕೆ ೪

# ತಂತ್ರಕ್ಕೆ ತಂತ್ರ !

ಎತ್ತರ ಬೆಳೆದು ಹಚ್ಚಗೆ ಕಾಣುತೆ
ಉತ್ತಮವಾದಾ ಕಬ್ಬಿನ ಬೆಳೆಸು,
ಕಿತ್ತನ ಹಳ್ಳಿಯ ನರಸ ರೈತನದು
ಬಿತ್ತರ ಹೊಲ ಬಲು ಹುಲುಸಾಗಿದ್ದುದು.

ಅಮೃತರಸವೆ ತುಂಬಿದ ಕಬ್ಬೆಲ್ಲಾ
ಸಮೃದ್ಧ ಪಸರಿಸಿ ಹೊಲದೊಳಗೆಲ್ಲ
ಕಂಡ ಜನರ ಕಣ್ ಕುಕ್ಕತಲಿತ್ತು
ಪುಂಡನರಿಗಳಿಗೆ ಜೊಲ್ಲಿಳಿಸಿತ್ತು!

ಇರುಳು ವೇಳೆಯಲಿ ಗುಟ್ಟಾಗಿ,
ನರಿಗಳು ಬಂದುವು ಹಿಂಡಾಗಿ!






ಕೊಬ್ಬಿದ ನರಿಗಳು ಹೊಕ್ಕಾಹೊಲವ
ಕಬ್ಬಿನ ಕೋಲ್ಗಳ ಮೆದ್ದು ಈಂಟಿ ಬಲ್
ಉಬ್ಬುತೆ ಪೋದುವು ಬೆಳಗುವ ಮೊದಲೇ,
ಅಬ್ಬೋ—ಎಂದತಿ ಚಿಂತಿಸಿ ರೈತ
ಒಬ್ಬನೆ ಯೋಚಿಸಿ ತಲೆ ತುಂಬಾ,—

ಒಂದು ಗಡಿಗೆಗೇ ಹುಲಿಮುಖ ಬರೆದು
ಹೊಂದಿಸಿ ಮೇಲ್ಗಡೆ ಚರ್ಮವ ಬಿಗಿದು
ಸೇರಿ ತಂದೆಯೂ ಮಗನೂ ಇರುಳೊಳ್
ಭೋರು ಭೋರೆಂದು ಬಾರಿಸುತಿರಲು,

ಹುಲಿಯೇ ಕುಳಿತು ಗರ್ಜಿಸುವಂತೆ
ಕೆಲಬಲಕೆಲ್ಲಾ ತೋರುತಲಿತ್ತು.
ನರಿಗಳಿಗೆಲ್ಲಾ ಅಂಜಿಕೆ ಬರಲು
ಸರಿಯದೆ ಮುಂದೆ, ಅಡಗಿದುವು;
ಮೋಸದ ಹುಲಿಗೆ ನಡುಗಿದುವು.





"ಮಾರಂಗ"

ಗಡಿಗೆ ಬಾಜಿಪುದು ತನ್ನ ಮಗನೆಂದು
ಕೊಂಡು ಮಲಗಿದನು ತಂದೆ;

ತಂದೆಯೆ ಹೊಲದಲಿ ಕಾಯುವುದೆನ್ನುತ
ನಿದ್ರಿಸಿದನು ಮಗ ಸುಖದಿಂದೆ!
ಒಂದೇ ಇರುಳಲಿ ನರಿಗಳ ಗುಂಪು
ಹೊಲವ ಸೂರೆಯಾಡಿ,

ಹೊತ್ತು ಮೂಡುವ ಮುನ್ನವೆ ಎಲ್ಲಾ
ಮಾಯವಾದುವೈ–ಓಡಿ.
ತಂದೆ ಮಗಂದಿರು ಹೊಲನೋಡಿ,
ಬೆಪ್ಪು! ಬೆರಗು!! ಮೋಡಿ!!!

ತಂತ್ರಗಾರ ನರಿಯೊಂದು ದಿವಸ ತಾ
ಬಂದಿತಲ್ಲಿ ಬಳಸಿ.
ಹೊಂಚಿತಲ್ಲಿಯೇ ರಾತ್ರಿಯೆಲ್ಲವೂ
ಹುಲಿಯು ಕಾಣಲೆಳಸಿ.

ತಿಳಿಯಿತಾಗಲೇ ರೈತನು ತಾನೇ
ಭೋರು ಭೋರು ಎನುತ
ಗಡಿಗೆಬಾರಿಸುವ ಚೆಂದವ ಕಂಡು
ಹೋಯ್ತು ತಾನೆ ನಗುತ.

ಮರುದಿನ ರಾತ್ರಿ ಜತೆನರಿಗಳನೂ
ಕೂಡಿಬಂತು ಹೊಲದೆಡೆಗೆ.
ರೈತನು ತೆರಳಿದ ಸಂಧಿಯ ಕಾದು
ಕೆರೆಯಿತು ಆನರಿ ಹುಲಿಗಡಿಗೆ!

ಭೋರು ಭೋರೆಂದು ಅದು ವೊಳಗೆ,
ಕಬ್ಬಿನ ಔತಣ ನರಿಗಳಿಗೆ!!



# ಮುಖ ಚಿತ್ರ

ಅರ್ಜುನನು, ಶಿವನನ್ನೂ, ದೇವೇಂದ್ರನನ್ನೂ ಮೆಚ್ಚಿಸಿ, ದಿವ್ಯಾಸ್ತ್ರಗಳನ್ನೂ, ಅನೇಕ ವರಗಳನ್ನೂ ಪಡೆದುಕೊಂಡು ತನ್ನ ಸಹೋದರರನ್ನು ಬಂದು ಕೂಡಿದನು. ಧರ್ಮ ರಾಯಾದಿಗಳು ಅಲ್ಲಿಂದ ಅತ್ಯುತ್ಸಾಹವಾಗಿ ತಮ್ಮ ವನವಾಸವನ್ನು ಮುಂದುವರಿಸುತ್ತ ಹಿಮವತ್ಪ್ರಾಂತದಲ್ಲಿ ತಿರುಗಾಡುತ್ತಿದ್ದಾಗ,

ಒಂದು ದಿನ ಭೀಮಸೇನನು ಹೊರಗೆ ಹೋದವನು ಎಷ್ಟು ಹೊತ್ತಾದರೂ ಹಿಂದಿರುಗಿ ಬರಲೇ ಇಲ್ಲ. ಏನೋ ಅಶುಭ ಸೂಚನೆಗಳೂ ಧರ್ಮರಾಯನಿಗೆ ತೋರಿದುವು. ಅವನು ಭೀಮಸೇನನು ಹೋದ ಜಾಡು ಹಿಡಿಯುತ್ತಾ ಹೋಗಲು, ಭೀಮ ಸೇನನು ಬಿಡುವ ಶ್ವಾಸದ ಸದ್ದು ಕೇಳ ತೊಡಗಿತು. ಅಲ್ಲಿ ಹೋಗಿ ನೋಡಲು,

ಪ್ರಚಂಡಾಕಾರವಾದೊಂದು ಸರ್ಪವು ಭೀಮಸೇನನನ್ನು ಬಿಗಿದುಹಾಕಿ ಬಿಟ್ಟಿತ್ತು. ಅದು ಸಾಮಾನ್ಯ ಸರ್ಪವಲ್ಲವೆಂದು ಧರ್ಮರಾಯನು ಕೂಡಲೇ ಅರಿತ. ವಿಚಾರಿಸಲಾಗಿ ಆ ಸರ್ಪವೆಂದಿತು: "ಇದು ನನ್ನ ಪ್ರದೇಶ. ಇಲ್ಲಿಗೆ ಬಂದವರನ್ನು ಕೊಂದು ತಿನ್ನುವ ಹಕ್ಕು ನನಗಿದೆ. ನಾನು ಕೇಳುವ ಪ್ರಶ್ನೆಗಳಿಗೆ ತಕ್ಕ ಉತ್ತರ ಕೊಟ್ಟವರನ್ನು ಮಾತ್ರ ಬಿಡುತ್ತೇನೆ—ಆಗ ನನಗೂ ಶಾಪವಿಮೋಚನೆ" ಎಂದು ತನ್ನ ವೃತ್ತಾಂತ ತಿಳಿಸಿತು:—

ಹಿಂದೆ ಚಂದ್ರವಂಶದಲ್ಲಿ ನಹುಷನೆಂಬ ರಾಜನಿದ್ದ. ಅವನು ಅನೇಕ ಉತ್ತಮ ಕಾರ್ಯಗಳನ್ನು ಮಾಡಿ ಇಂದ್ರಪದವಿ ಪಡೆದಾಗ ಅವನ ಪಾಲಕಿಯನ್ನು ಮಹರ್ಷಿಗಳೇ ಹೊರುತ್ತಿದ್ದರು. ಹಾಗೆ ಋಷಿಗಳಿಂದ ಹೊರಿಸಿಕೊಂಡ ನಹುಷನು ಗರ್ವದಿಂದ "ಎಷ್ಟು ನಿಧಾನ, ಸರಸರ ಹೋಗಿ" ಎಂದನು. ಅಗಸ್ತ್ಯನಿಗೆ ಕೋಪಬಂದು— "ನೀನು ಸರ್ಪವಾಗು" ಎಂದು ಶಪಿಸಿದನು. ಮತ್ತೆ ನಹುಷನು ಪಶ್ಚಾತ್ತಾಪದಿಂದ ಬೇಡಿಕೊಳ್ಳಲು, ಆ ಋಷಿ ಕರುಣೆಗೊಂಡು "ನೀನು ಕೇಳುವ ಧರ್ಮಸೂಕ್ಷ್ಮ ಪ್ರಶ್ನೆಗಳಿಗೆ ತಕ್ಕ ಉತ್ತರ ಕೊಟ್ಟವರಿಂದ ನಿನಗೆ ಶಾಪ ವಿಮೋಚನೆ. ಇಲ್ಲದಿದ್ದರೆ ಅವರೇ ನಿನ್ನ ಆಹಾರ" ಎಂದು ಅನುಗ್ರಹಿಸಿದನು.

ಹೀಗೆಂದು ಆ ಅಜಗರವು ಯುಧಿಷ್ಠಿರನನ್ನು ಕುರಿತು ಅನೇಕ ಧರ್ಮ ಸೂಕ್ಷ್ಮಗಳನ್ನು ಕೇಳಿತು. ಇಬ್ಬರಿಗೂ ಧರ್ಮಸಂವಾದವು ಜರುಗಿತು. ಧರ್ಮರಾಯನು ಸಮರ್ಪಕವಾಗಿ ಉತ್ತರ ಹೇಳಲು, ಸರ್ಪವು ಧರ್ಮರಾಯನಿಗೆ ತಲೆವಾಗಿ, ಭೀಮ ಸೇನನನ್ನು ಬಿಟ್ಟಿತು. ಅಗಲೇ ನಹುಷನ ಶಾಪವಿಮೋಚನೆಯಾಗಿ, ಆಕಾಶದಿಂದ ಇಳಿದು ಬಂದ ದಿವ್ಯವಿಮಾನದಲ್ಲಿ ದಿವ್ಯದೇಹದಿಂದ ಹೊರಟು ಹೋದನು.



# ಕುರುಡು ನ್ಯಾಯ

ಒಂದು ಗ್ರಾಮದಲ್ಲಿ ಇಬ್ಬರು ಸಹೋದರರಿದ್ದರು. ಹಿರಿಯವನು ಹಣವಂತ. ಕಿರಿಯವನು ಬಡರೈತ. ಕಿರಿಯವನು ಒಂದು ಸಾರಿ ತನ್ನ ಹೊಲಕ್ಕೆ ಮಣ್ಣು ಹೊಡೆಯಬೇಕಾಗಿ ಬಂತು. ಆದುದರಿಂದ ಅವನು ಅಣ್ಣನ ಬಳಿಗೆ ಹೋಗಿ ಎತ್ತಿನ ಗಾಡಿ ಎರವಲು ಕೊಡುವಂತೆ ಕೇಳಿದ. ಎತ್ತುಗಳಿಗೆ ಹುರುಳಿ ಹಾಕಿ ಕತ್ತಲಾಗುವ ಮೊದಲೇ ಮನೆಗೆ ತಂದುಬಿಡುವ ಷರತ್ತಿನಮೇಲೆ ಅಣ್ಣನು ಒಪ್ಪಿಕೊಂಡ. ತಮ್ಮ ಕೆಲಸ ಮುಗಿಸಿಕೊಂಡು ಗಾಡಿಯನ್ನು ಅಣ್ಣನ ಮನೆಗೆ ಹೊಡೆದುಕೊಂಡು ಬರುತ್ತಿರುವಾಗ ತುಸ ಅಜಾಗರೂಕತೆಯಿಂದಾಗಿ ಎತ್ತಿನ ಕೊಂಬು ಗೋಡೆಗೆ ತಗುಲಿತು. ಕೂಡಲೇ ಎತ್ತಿನ ಕೊಂಬು ಮುರಿದು ಹೋಯಿತು.

ಅಣ್ಣ ತಮ್ಮನಮೇಲೆ ಕುಪಿತನಾಗಿ ತಗಾದೆ ಮಾಡಿದ. ನ್ಯಾಯಾಧಿಕಾರಿ ನೆರೆಗ್ರಾಮದಲ್ಲಿದ್ದ. ಆ ಕೂಡಲೇ ಇಬ್ಬರು ಸಹೋದರರೂ ಆ ಗ್ರಾಮಕ್ಕೆ ತೆರಳಿದರು. ಆ ಊರಿನ ಪಟೇಲನು ಅಣ್ಣನಿಗೆ ತುಂಬಾ ಮರ್ಯಾದೆಯನ್ನು ಮಾಡಿದ. ತಮ್ಮನನ್ನು ಮಾತ್ರ ಮಾತನಾಡಿಸಲೂ ಇಲ್ಲ. ತಮ್ಮ ನಡು ಮನೆಯಲ್ಲಿ ಒಂದು ಬೆಂಚಿನಮೇಲೆ ಮಲಗಿಕೊಂಡ. ಬಹಳ ಆಯಾಸಗೊಂಡಿದ್ದನಾದುದರಿಂದ ಮಲಗಿದ ಕೂಡಲೇ ಆತನಿಗೆ ನಿದ್ದೆ ಬಂದುಬಿಟ್ಟಿತು. ಗಾಢನಿದ್ರೆಯಲ್ಲಿ ಆ ಬಡರೈತ ಬೆಂಚಿನಮೇಲಿಂದ ಉರುಳಿ ಕೆಳಗೆ ಬಿದ್ದುಬಿಟ್ಟ. ಬೆಂಚಿನ ಪಕ್ಕದಲ್ಲಿ ಚಾಪೆಯಮೇಲೆ ಪಟೇಲನ ಒಂದು ವರ್ಷದ ಮೊಮ್ಮಗನನ್ನು ಮಲಗಿಸಿದ್ದರು. ತಮ್ಮ ಆ ಸಣ್ಣ ಮಗುವಿನಮೇಲೆ ಬಿದ್ದುಬಿಟ್ಟ. ಆ ಮಗುವಿನ ಕಾಲು ಮುರಿದುಹೋಯಿತು. ವೈದ್ಯ ಬಂದು ನೋಡಿ ಮಗುವಿನ ಕಾಲು ಸೊಟ್ಟಗಾಗುವುದೆಂದು ಹೇಳಿದ.

ಪಟೇಲನಿಗೆ ಬಹಳ ಕೋಪ ಬಂದಿತು. ಆತನೂ ಸಹ ಬಡರೈತನ ಮೇಲೆ ದಾವೆ ಹಾಕಲು ನಿರ್ಧರಿಸಿ, ಅವರೊಂದಿಗೆ ನ್ಯಾಯಾಸ್ಥಾನಕ್ಕೆ ಹೊರಟ.

ಹೋಗುವ ದಾರಿಯಲ್ಲಿ ಒಂದು ಕಾಲುವೆ, ಅದರಮೇಲೆ ಎತ್ತರವಾದ ಒಂದು ಸೇತುವೆ

ಎಂ. ಎಚ್. ಕಲ್ಯಾಣಮ್ಮ.



ಯಿತ್ತು. ಪಟೇಲ ಮತ್ತು ಅಣ್ಣತಮ್ಮಂದಿರು ಆ ಸೇತುವೆಯ ಬಳಿಗೆ ಬರಲು ತಮ್ಮನಿಗೆ ಆತ್ಮಹತ್ಯೆ ಮಾಡಿಕೊಳ್ಳುವ ಬುದ್ಧಿ ಹುಟ್ಟಿತು. ತಾನು ಮಾಡಿದ ಕೆಲಸಗಳೆರಡೂ ಅಪರಾಧಗಳೆ! ಅಲ್ಲವೆಂದು ಯಾವ ನ್ಯಾಯಾಧಿಕಾರಿಯೂ ಹೇಳಲಾರ. ಈಗಾಗಲೇ ಬಡತನ ಕಿತ್ತುತಿನ್ನುತ್ತಿದೆ; ಇನ್ನು ಜೈಲುವಾಸ ಬೇರೆ? ಜೀವನದಲ್ಲಿ ವಿರಕ್ತಿಹೊಂದಿ ಬಡರೈತನು ಸೇತುವೆಯಮೇಲಿಂದ ಕಾಲುವೆಗೆ ಹಾರಿದ.

ಅದೇ ಸಮಯಕ್ಕೆ ಸೇತುವೆಯ ಕೆಳಗಿನಿಂದ ಒಂದು ದೋಣಿ ಹೊರಬರುವುದೂ, ಆ ದೋಣಿಯ ಮೇಲು ಭಾಗದಲ್ಲಿ ಮಲಗಿದ್ದ ಒಬ್ಬಾತನಮೇಲೆ ಈ ಬಡರೈತನು ಬೀಳುವುದೂ, ಹಾಗೆ ಬಿದ್ದತಕ್ಷಣ ಮಲಗಿದ್ದಾತನು ಸತ್ತುಹೋಗುವುದೂ ಸಂಭವಿಸಿತು. ಕೂಡಲೇ ಮಡಿದಾತನ ಮಗನು ಈ ಬಡರೈತನನ್ನು ನಾನಾವಿಧವಾಗಿ ದೂಷಿಸಿ, ಫಿರ್ಯಾದಿಗಳಲ್ಲಿ ಒಬ್ಬನಾಗಿ ನ್ಯಾಯಾಸ್ಥಾನಕ್ಕೆ ಹೊರಟುನಿಂತ. ಬಡರೈತನ ಹೃದಯ ಭಗ್ಗೆಂದು ಉರಿಯತೊಡಗಿತು. ತಾನೇನು ಮಾಡಿದರೂ ಅಪರಾಧವಾಗಿ ಪರಿಣಮಿಸಬೇಕೇ? ಸಾಯೋಣವೆಂದರೆ ಸಾವೂ ಬರುವುದಿಲ್ಲವೆ? "ಇಷ್ಟೊಂದು ಅಪರಾಧಗಳನ್ನು ತಿಳಿಯದೆಮಾಡಿದೆ. ಈಸಾರಿ ತಿಳಿದೇ ಮಾಡುತ್ತೇನೆ. ನ್ಯಾಯಾಧಿಕಾರಿ ನನಗೆ ವ್ಯತಿರಿಕ್ತವಾಗಿ ತೀರ್ಪಿತ್ತರೆ ಅವನ ತಲೆ ಒಡೆದು ಬಿಡುತ್ತೇನೆ" ಎಂದುಕೊಂಡು ಬಡರೈತನು ದಾರಿಯಲ್ಲಿ ಸಿಕ್ಕಿದ ಒಂದು ದೊಡ್ಡ ಇಟ್ಟಿಗೆಯನ್ನು ಯಾರಿಗೂ ತಿಳಿಯದಂತೆ ತನ್ನ ಅಂಗವಸ್ತ್ರದಲ್ಲಿ ಕಟ್ಟಿಕೊಂಡು ಫಿರ್ಯಾದಿಗಳೊಂದಿಗೆ ನ್ಯಾಯಾಸ್ಥಾನಕ್ಕೆ ಹೋದನು.

ಮೊದಲು ಹಣವಂತನಾದ ಅಣ್ಣ ತಮ್ಮನ ಮೇಲೆ ಫಿರ್ಯಾದುಮಾಡಿದ. ತನ್ನ ಹತ್ತಿರವಿದ್ದ ಎತ್ತಿನಗಾಡಿಯನ್ನು ಉಪಯೋಗಿಸಿಕೊಂಡದ್ದು ಮಾತ್ರವಲ್ಲದೆ ಗಾಡಿ ಹೊಡೆಯುವಾಗ ಬುದ್ಧಿಪೂರ್ವಕವಾಗಿ ಒಂದು ಎತ್ತಿನ ಕೊಂಬು ಮುರಿದುಹಾಕಿದನೆಂದು ನ್ಯಾಯಾಧಿಕಾರಿಗೆ ಹೇಳಿದ. ಆತನು ಹಾಗೆ ಹೇಳುತ್ತಿರುವಲ್ಲಿ ತಮ್ಮನು ತನ್ನ ಅಂಗವಸ್ತ್ರದ ಕೊನೆಗೆ ಕಟ್ಟಿಕೊಂಡಿದ್ದ ಇಟ್ಟಿಗೆಯ ಮೂಟೆಯನ್ನು ನ್ಯಾಯಾಧಿಕಾರಿಗೆ ತೋರಿಸಿದ.

ಅಪರಾಧಿ ತನಗೆ ನೂರು ರೂಪಾಯಿ ಕೊಡುವುದಾಗಿ ಸನ್ನೆಮಾಡುತ್ತಿರುವನೆಂದು ನ್ಯಾಯಾಧಿಕಾರಿ ಭಾವಿಸಿ ಹೀಗೆಂದ:

"ನಿನ್ನ ಎತ್ತಿನ ಕೊಂಬು ಮುರಿದು ಹಾಕಿದನಾದುದರಿಂದ ಆ ಕೊಂಬು ಮತ್ತೆ ಬೆಳೆದು ದೊಡ್ಡದಾಗುವವರೆವಿಗೂ ಆ ಎತ್ತಿನ ಮೇವು, ಖರ್ಚು, ವಗೈರೆಗಳನ್ನು ಆತನೇ ವಹಿಸಿಕೊಂಡು, ಎತ್ತನ್ನು ಆತನ ಹತ್ತಿರದಲ್ಲೇ ಇಟ್ಟುಕೊಳ್ಳಬೇಕು."

ಎರಡನೇ ದೂರು ಪಟ್ಟಣಕ್ಕೆ ಸೇರಿದ ಪಟೇಲನದು. ಅಪರಾಧಿ ಬೆಂಚಿನಮೇಲಿಂದ ಬಿದ್ದು ಮಗುವಿನ ಕಾಲು ಸೊಟ್ಟಗೆ ಮಾಡಿದ ನೆಂದು ಆತನು ಆರೋಪಣೆಯನ್ನು ವಿವರಿಸಿದ. ಈ ಬಾರಿಯೂ ತಮ್ಮನು ಇಟ್ಟಿಗೆಯ ಮೂಟೆಯನ್ನು ತೋರಿಸಿ, ನ್ಯಾಯಾಧಿಕಾರಿಯನ್ನು ಬೆದರಿಸಿದ. ಇದನ್ನು ನೋಡಿ ಮತ್ತೆ ಇನ್ನೊಂದು ನೂರು ರೂಪಾಯಿ ಲಂಚ ಕೊಡುವನೆಂದು ಭಾವಿಸಿ, ನ್ಯಾಯಾಧಿಕಾರಿ ಈ ರೀತಿ ತೀರ್ಪಿತ್ತ:

"ಫಿರ್ಯಾದಿಯ ಮೊಮ್ಮಗನ ಕಾಲು ಶಾಶ್ವತವಾಗಿ ಸೊಟ್ಟಗಾಗುವುದರಿಂದ ಅಪರಾಧಿ ತನ್ನ ಒಂದುವರ್ಷದ ಮಗನನ್ನು ಫಿರ್ಯಾದಿಗೆ ಕೊಟ್ಟು, ಆ ಅಂಗವಿಕಲವಾದ ಹಸುಳೆಯನ್ನು ಪಡೆಯಬೇಕು. ಒಂದುವೇಳೆ ಅಪರಾಧಿಗೆ ಆ ವಯಸ್ಸಿನ ಮಗ ನಿಲ್ಲದಿದ್ದರೆ ಮಗನು ಹುಟ್ಟಿದ ಒಂದು ವರ್ಷದ ವರೆವಿಗು ಫಿರ್ಯಾದಿ ಕಾಯಬೇಕು." ಇದಾದ ಮೇಲೆ ದೋಣಿಯವನ ಸರದಿ: "ಅಪ





ರಾಧಿ ಸೇತುವೆಯ ಮೇಲಿಂದ ದೋಣಿಯ ಮೇಲ್ಭಾಗದಲ್ಲಿದ್ದ ಫಿಯಾರ್ಾದಿಯ ಪಿತನ ಮೇಲೆ ಹಾರಿ ಆತನ ಮರಣಕ್ಕೆ ಕಾರಣನಾದ. ಅಪರಾಧಿಗೆ ತಕ್ಕ ಶಿಕ್ಷೆ ವಿಧಿಸಬೇಕು."

ಮೂರನೇಸಾರಿ ಬಡರೈತ ತನ್ನ ಮೂಟೆಯನ್ನು ನ್ಯಾಯಾಧಿಕಾರಿಗೆ ತೋರಿಸಿದ. ಮುನ್ನೂರು ರೂಪಾಯಿ ಲಂಚ ಕೊಡುವನೆಂದು ಊಹಿಸಿ, ನಾಯಾಧಿಕಾರಿ ಗಂಭೀರವಾಗಿ ಹೀಗೆಂದ: "ಅಪರಾಧಿ ದೋಣಿಯಲ್ಲಿ ಪ್ರಾಯಾಣ ಮಾಡುವಂತಾಗಬೇಕು. ಆ ದೋಣಿ ಸರಿಯಾಗಿ ಸೇತುವೆಯಕೆಳಗಿಂದ ಮುಂದೆ ಸಾಗುವಾಗ ಸತ್ತುಹೋದಾತನ ಮಗನು ಸೇತುವೆಯ ಮೇಲಿಂದ ಅಪರಾಧಿಯ ಮೇಲೆ ಹಾರಬೇಕು."

ವಿಚಾರಣೆ ಮುಗಿಯಿತು. ಈ ಮೂರು ಗಂಡಗಳಿಂದ ತಪ್ಪಿಸಿಕೊಂಡುದಕ್ಕೆ ಸಂತೋಷಗೊಂಡು ಬಡರೈತನು ಹೊರಗೆ ಬರುತ್ತಿರಲು ನ್ಯಾಯಾಧಿಕಾರಿಯ ಸೇವಕನು ಅಲ್ಲಿಗೆ ಬಂದು: "ಸ್ವಾಮಿ, ತಮ್ಮನ್ನು ಕೇಳಿ ಮುನ್ನೂರು ರೂಪಾಯಿ ತರುವಂತೆ ಸಾಹೇಬರು ಹೇಳಿದರು" ಎಂದು ಪಿಸುಗುಟ್ಟಿದನು.

"ಮುನ್ನೂರು ರೂಪಾಯಿ?" ಚಕಿತನಾಗಿ ಕೇಳಿದ ಬಡರೈತ. "ಮೂರು ಕೇಸುಗಳಿಗೂ ಲಂಚಕೊಡುವೆನೆಂದು ಮೂಟೆ ತೋರಿಸಿದಿರಂತೆ ನೀವು?" ಎಂದ ಜವಾನ.

ಬಡರೈತನಿಗೆ ಕೊಪ ಬಂತು. "ಇದೋ ನೋಡು. ಈ ಮೂಟೆಯಲ್ಲಿರುವುದು ಹಣವಲ್ಲ. ಇಲ್ಲಿ ನಿಮ್ಮ ಸಾಹೇಬರು ನನಗೆ ವಿರುದ್ಧವಾಗಿ ತೀರ್ಪುಕೊಟ್ಟಿದ್ದರೆ, ಮುಂದೆ ಏನಾದರಾಗಲೀ ಎಂದು ಇದರಿಂದ ಅವರ ತಲೆ ಒಡೆಯುತ್ತಿದ್ದೆ. ಹಾಗೆ ಮಾಡುವೆನೆಂದು ನಾನು ಸಂಜ್ಞೆಮಾಡಿದೆ. ಈ ವಿಷಯಕೂಡಲೇ ನಿಮ್ಮ ಸಾಹೇಬರಿಗೆ ತಿಳಿಸು" ಎಂದ.

ಜವಾನನ ಮಾತು ಕೇಳಿ ನ್ಯಾಯಾಧಿಕಾರಿ "ಬದುಕಿದೆಯಾ ಬಡಜೀವ! ದೈವಪ್ರೇರಣೆಯಿಂದಲೇ ಅವನಿಗೆ ವಿರುದ್ಧವಾಗಿ ತೀರ್ಪು ಕೊಡಲಿಲ್ಲ. ಹಾಸಿಗೆಯಿಂದ ಎದ್ದಗಳಿಗೆ ಒಳ್ಳೆಯದು" ಎಂದುಕೊಂಡ.

ತಮ್ಮನು ನ್ಯಾಯಾಸ್ಥಾನವನ್ನು ಬಿಟ್ಟು ಹೊರಗೆ ಬಂದಕೂಡಲೇ ಅಣ್ಣನು ಅವನ ಕೈಗಳನ್ನು ಹಿಡಿದುಕೊಂಡು "ತಮ್ಮಾ; ಏನೋ

ಆದದ್ದು ಆಗಿಹೋಯಿತು. ನನ್ನ ಎತ್ತನ್ನು ನನಗೆ ಕೊಟ್ಟುಬಿಟ್ಟರೆ ನಿನಗೆ ನೂರುರೂಪಾಯಿ ಕೊಡುವೆನು. ಬಹಳ ಹಣಸುರಿದು ಅವುಗಳನ್ನು ಕೊಂಡುಕೊಂಡೆ" ಎಂದ.

ತಮ್ಮನು ಮರುಮಾತನಾಡಲಿಲ್ಲ. ಅಣ್ಣನು ಕೊಟ್ಟ ಹಣದ ಚೀಲವನ್ನು ಸೊಂಟಕ್ಕೆ ಸಿಕ್ಕಿಸಿದ. ಸ್ವಲ್ಪದೂರ ಹೋಗಲು ಪಟೇಲನು ಬಡರೈತನನ್ನು ಸಮೀಪಿಸಿ "ನೋಡು ತಮ್ಮಾ, ಕುಂಟೋ ಕುರುಡೋ, ನನ್ನ ಮೊಮ್ಮಗ ನನ್ನ ಮನೆಯಲ್ಲೇ ಇರಲಿ. ನಾಲ್ಕು ಖಂಡುಗ ಧಾನ್ಯವನ್ನು ನಿನ್ನ ಮನೆಗೆ ಕಳುಹಿಸಿಕೊಡುವೆನು. ಇದೋ ಈ ಹಣ ತೆಗೆದುಕೊ. ನಮ್ಮೂರಿಗೆ ಬಂದು ಎರಡು ದಿನ ಇದ್ದು ಹೋಗದಿದ್ದರೆ ನನಗೆ ಕೋಪಬರುತ್ತದೆ ಕಂಡೆಯಾ. ಹೂಂ. ಆಷ್ಟೇ!" ಎಂದು ಹಣದ ಚೀಲವನ್ನು ಕೈಗೆ ಕೊಟ್ಟು, ಆತನನ್ನು ಪುಸಲಾವಣೆ ಮಾಡಿದ.

ತಮ್ಮ ಪಟೇಲನು ಕೊಟ್ಟ ಚೀಲವನ್ನು ತೆಗೆದುಕೊಂಡು "ಅವಕಾಶವಾದಾಗ ಖಂಡಿತವಾಗಿ ನಿಮ್ಮ ಮನೆಗೆ ಬರುತ್ತೇನೆ" ಎಂದ.

ತರುವಾಯ ದೋಣಿಯ ಪ್ರಯಾಣಿಕನು ತಮ್ಮನಬಳಿಗೆ ಬಂದು "ರೀ ಇಲ್ಲಿ ನೋಡಿ. ನನಗೇನೋ ಈ ಕೇಸುಹಾಕಲು ಸುತರಾಂ ಇಷ್ಟವಿರಲಿಲ್ಲ. ಆದರೇನು ಮಾಡಲಿ, ನಮ್ಮ ಬಂಧುಗಳು ಪೀಡಿಸಿ ಫಿರ್ಯಾದು ಮಾಡಿಸಿದರು. ನೀವು ಬೇಕೂಂತ ನಮ್ಮ ತಂದೆಯನ್ನು ಸಾಯಿಸಿದಿರಾ? ನೀವು ನನ್ನನ್ನು ಇಷ್ಟಕ್ಕೇ ಬಿಟ್ಟುಬಿಟ್ಟರೆ ನಿಮಗೆ ಯಥಾಶಕ್ತಿ ಕೊಟ್ಟುಕೊಳ್ಳುವೆನು" ಎಂದು ಒಂದು ಹಣದ ಸಂಚಿಯನ್ನು ಕೊಟ್ಟು ಕೈ ಜೋಡಿಸಿ ನಮಸ್ಕಾರ ಮಾಡಿದ. ಆ ತುಂಬಿದ ದೊಡ್ಡ ಚೀಲದಲ್ಲಿ ಬಹಳ ಹಣವಿತ್ತು.

ಇಷ್ಟು ದಿನಗಳಾದ ಮೇಲೆ ತಮ್ಮನ ದಾರಿದ್ರ್ಯ ಕಳೆಯಿತು. ಕೆಡಕೂ ಸಹ ಒಮ್ಮೊಮ್ಮೆ ಒಳ್ಳೆಯದಕ್ಕೇ ಸಂಭವಿಸುವುದೆಂದು ಕೊಳ್ಳುತ್ತಾ ತನ್ನ ಮನೆ ಸೇರಿಕೊಂಡ.

ತನಗೆ ಲಭಿಸಿದ ಹಣದಿಂದ ಒಂದು ಜೊತೆ ಎತ್ತು, ಒಂದಷ್ಟು ಭೂಮಿ ಕೊಂಡು ಕೊಂಡು ಸ್ವತಃ ಸಾಗುವಳಿ ಮಾಡಿಕೊಂಡು ಸುಖವಾಗಿ ಜೀವಿಸುತ್ತಿದ್ದ ಆ ಬಡರೈತನಾದ ತಮ್ಮ!





# ಮರ್ಯಾದೆಯಾದ ಬಾಳು

ಮುಸ್ಲಿಮರಿಗೆ ಪವಿತ್ರವಾದ ಯಾತ್ರಾಸ್ಥಳ ಮಕ್ಕಾನಗರ. ಒಂದು ದಿನ ಇಸ್ಲಾಂಮತ ಸ್ಥಾಪಕನಾದ ಮಹಮುದನು ಮಕ್ಕಾನಗರದ ರಾಜಬೀದಿಯಲ್ಲಿ ಹೋಗುತ್ತಿದ್ದನು. ಆಗ ಒಬ್ಬ ಭಿಕ್ಷುಕನು ಆತನನ್ನು ಸಮೀಪಿಸಿ, ಯಾಚನೆಮಾಡಿದನು.

ಮಹಮುದನು ತಟಕ್ಕನೆ ನಿಂತು ಭಿಕ್ಷುಕನನ್ನು ನೋಡಿದನು. ಯಾಚಕನು ದೃಢಕಾಯನೇ ಆಗಿದ್ದನು. ಕೈಯಲ್ಲಿ ಒಂದು ತಟ್ಟೆಯಿತ್ತು. ಹರಿದ ಮತ್ತು ತೀರ ಮಲಿನವಾದ ಒಂದು ಕಂಬಳಿಯನ್ನು ಹೊದ್ದುಕೊಂಡಿದ್ದ. ಅವನಲ್ಲಿ ದೈನ್ಯವು ತುಂಬಿತ್ತು.

"ಬಿಕ್ಕೆ ಬೇಡುವಷ್ಟು ಬಡವನೇ ನೀನು?" ಎಂದು ಪ್ರಶ್ನಿಸಿದ ಮಹಮುದ್.

"ಅಯ್ಯಾ, ಈ ಪ್ರಪಂಚದಲ್ಲಿ ನನಗಿರುವ ಆಸ್ತಿ ಎಂದರೆ ಈ ತಟ್ಟೆ ಮತ್ತು ಕಂಬಳಿ ಮಾತ್ರ" ಎಂದು ಉತ್ತರವಿತ್ತ ಭಿಕ್ಷುಕ.

"ಹಾಗಾದರೆ ಅವುಗಳನ್ನು ನನಗೆ ಕೊಡು" ಎಂದ ಮಹಮುದ್. ಮಹಮುದನ ಉದ್ದೇಶವನ್ನು ಗ್ರಹಿಸಲಾರದೆ ಆ ಭಿಕ್ಷುಕನು ತನ್ನ ಕಂಬಳಿ ಮತ್ತು ತಟ್ಟೆಗಳನ್ನು ಮಹಮುದನಿಗೆ ಕೊಟ್ಟುಬಿಟ್ಟನು. ಕೂಡಲೇ ಮಹಮುದನು ಅವುಗಳನ್ನು ಹಾದಿಯಲ್ಲಿ ಹೋಗುತ್ತಿದ್ದವರಿಗೆ ಮಾರಿಬಿಟ್ಟನು. ಆ ವಸ್ತುಗಳ ಬೆಲೆ ತೀರ ಅಲ್ಪವೇ ಆಗಿದ್ದರೂ ಸಹ ಮಹಮುದನೇ ಸ್ವಂತ ಕೈಯಿಂದ ಮಾರುತ್ತಿರುವನಾದುದರಿಂದ ಅವುಗಳಿಗೆ ಒಳ್ಳೆಯ ಗಿರಾಕಿ ಬಂದಿತ್ತು.

"ಅಯ್ಯಾ, ನನಗಿದ್ದ ಅಲ್ಪಸ್ವಲ್ಪ ಆಸ್ತಿಯನ್ನೂ ಮಾರಿಬಿಟ್ಟರಿ. ಕಂಬಳಿಯಿಲ್ಲದೆ ನಾನಿಂದು ರಾತ್ರಿ ಕಳೆಯುವುದೆಂತು? ತಟ್ಟೆಯಿಲ್ಲದೆ ನಾನು ಊಟಮಾಡುವುದಾದರೂ ಹೇಗೆ?" ಎಂದು ಗೋಗರೆದ.

ಮಹಮುದನು ಗಂಭೀರವಾಗಿ ಹೀಗೆಂದು ನುಡಿದ: "ತಮ್ಮಾ, ಅವು ನಿನ್ನ ಸೊತ್ತು ಅಲ್ಲ, ನಿನ್ನ ಅಪಮಾನ. ಅವು ನಿನ್ನಬಳಿ ಇರುವಷ್ಟು ದಿನ ನಿನಗೆ ಮಾನವತ್ವವಿರುವುದಿಲ್ಲ. ಇದೋ ಈ ಹಣ ತೆಗೆದುಕೊಂಡು ಪೇಟೆಗೆ ಹೋಗಿ ಒಂದು ಕೊಡಲಿಯನ್ನು ಕೊಂಡುಕೋ. ಅಡ

ಕೆ. ವೆಂಕಟಕೃಷ್ಣಪ್ಪ

ವಿಗೆ ಹೋಗಿ ಅದರಿಂದ ಸೌದೆ ಸೀಳಿತಂದು ನಗರದಲ್ಲಿ ಮಾರಿ, ನಿನ್ನ ಹಸಿವು, ಚಳಿ ತೀರುವ ಮಾರ್ಗ ನೋಡಿಕೊ. ನಿನ್ನ ಈಗಿನ ಪರಿಸ್ಥಿತಿಯಲ್ಲಿ ತುಸ ಕಷ್ಟಕರವಾಗಿಯೇ ತೋರುವುದು. ಕಾಲಕ್ರಮೇಣ ಎಲ್ಲವೂ ಸರಿ ಹೋಗುವುದು. ಒಂದೆರಡು ವಾರಗಳ ನಂತರ ನನ್ನನ್ನು ಕಾಣು"

ಗತ್ಯಂತರವಿಲ್ಲದೆ ಭಿಕ್ಷುಕನು ಪ್ರವರ್ತಕನು ಹೇಳಿದಂತೆಯೇ ಮಾಡಿದ. ಕೊಡಲಿಯೊಂದನ್ನು ಕೊಂಡುಕೊಂಡ. ಅಡವಿಗೆ ಹೋಗಿ ಸೌದೆಯೊಡೆದು, ಅದನ್ನು ಮಾರಿ ಜೀವನ ಸಾಗಿಸುತ್ತಿದ್ದ.

ಎರಡುವಾರಗಳನಂತರ ಆ ವ್ಯಕ್ತಿ ಮಹಮದನ ಬಳಿಗೆ ಹೋದ. ಕೂಡಲೇ ಮಹಮದನಿಗೆ ಆತನನ್ನು ಗುರುತಿಸಲಾಗಲಿಲ್ಲ. ಏಕೆಂದರೆ ಈಗ ಆತನಲ್ಲಿ ದೈನ್ಯತೆಯು ದೂರವಾಗಿತ್ತು. ಶರೀರ ದೃಢಕಾಯವಾಗಿ ಕಣ್ಣುಗಳಲ್ಲಿ ತೀವ್ರತೆ ಎದ್ದು ಕಾಣುತ್ತಿತ್ತು. ಆತನು ತೊಟ್ಟಿದ್ದು ಅಗ್ಗವಾದ ಬಟ್ಟೆಗಳೇ ಆದರೂ ಶುಭ್ರವಾಗಿದ್ದುವು. "ಅಯ್ಯಾ, ನನಗೆ ಹೊಸ ಜೀವನವನ್ನು ಪ್ರಸಾದಿಸಿದಿರಿ. ಇನ್ನೊಬ್ಬರ ಮುಂದೆ ಕೈಚಾಚದೆ ನನ್ನ ಹೊಟ್ಟೆ ಹೊರೆದುಕೊಳ್ಳುತ್ತಿರುವೆನು. ಈಗ ಮತ್ತೊಬ್ಬರನ್ನು ಪೋಷಿಸುವಂತಹ ಪರಿಸ್ಥಿತಿಯಲ್ಲಿದ್ದೇನೆ!" ಎಂದ ಮಾಜಿ ಭಿಕ್ಷುಕ.

"ಕರುಣಾಮಯನಾದ ಅಲ್ಲಾಗೆ ಕೈ ಎತ್ತಿ ನಮಸ್ಕಾರಮಾಡು. ನೀನು ನಿನ್ನ ಬಾಳನ್ನು ಉತ್ತಮ ಪಡಿಸಿಕೊಂಡುದು ಮಾತ್ರವೇ ಅಲ್ಲದೆ, ನಿನ್ನಿಂದ ಈ ದೇಶಕ್ಕೆ ಉಂಟಾಗುತ್ತಿದ್ದ ಅಪಮಾನವನ್ನು ತೊಲಗಿಸಿದೆ. ಇದು ಯಾತ್ರಾಸ್ಥಳ. ಇಲ್ಲಿಗೆ ಸಾವಿರಾರು ಜನ ಪ್ರಪಂಚದ ನಾನಾಕಡೆಗಳಿಂದಲೂ ಬರುವುದುಂಟು. ನಿನ್ನ ಮಾತೃದೇಶದಲ್ಲಿ ಮಾನವತ್ವವನ್ನು ಕಳೆದುಕೊಂಡ ಭಿಕ್ಷುಕರಿರುವರೆಂದು ಅವರು ತಮ್ಮ ದೇಶಗಳಿಗೆ ಹಿಂತಿರುಗಿ ಅಲ್ಲಿ ಪ್ರಚಾರ ಮಾಡುವರು. ಅದಕಿಂತಲೂ ಅವಮಾನಕರವಾದ ವಿಷಯ ಇರುವುದೇ? ದೇಹ ದಂಡಿಸಿ ಜೀವಿಸುವುದಕ್ಕಿಂತ ಗೌರವವಾದ ಕೆಲಸ ಮಾನವನಿಗೆ ಮತ್ತೊಂದಿಲ್ಲ" ಎಂದು ಮಹಮದನು ಹಿತವಚನ ನುಡಿದ.






ಬ್ರಹ್ಮದತ್ತನು ಕಾಶಿರಾಜ್ಯವನ್ನು ಪರಿಪಾಲಿಸುವ ಕಾಲದಲ್ಲಿ ಒಂದುಸಾರಿ ಚಿತ್ರಕೂಟ ಪರ್ವತ ಪ್ರಾಂತದಲ್ಲಿ ಒಂಬತ್ತು ಸಾವಿರ ಹಂಸಗಳು ವಾಸಮಾಡುತ್ತಿದ್ದುವು. ಆ ಕಾಲದಲ್ಲಿ ಬೋಧಿಸತ್ವನು ಒಂದು ಹಂಸವಾಗಿ ಜನ್ಮ ತಾಳಿದನು. ಈ ಹಂಸ ಅನೇಕ ಸುಗುಣಗಳೊಂದಿಗೆ ತೀವ್ರವಾಗಿ ಹಾರುವ ಶಕ್ತಿಯನ್ನು ಪಡೆದು ಆ ಒಂಬತ್ತು ಸಾವಿರ ಹಂಸಗಳಿಗೆ ನಾಯಕನಾಯಿತು. ಈ ಒಡೆಯನಿಗೆ ರಾಜಹಂಸ ವೆಂದು ಹೆಸರು.

ಒಂದಾನೊಂದು ದಿನ ರಾಜಹಂಸ ತನ್ನ ತಂಡದೊಂದಿಗೆ ಸರೋವರದಲ್ಲಿ ಜಳಕವಾಡಿ ಮನೆಗೆ ಹಿಂತಿರುಗುತ್ತಿರಲು, ಕಾಶೀರಾಜ್ಯವನ್ನು ಹಾದು ಹೋಗಬೇಕಾಯಿತು. ಬ್ರಹ್ಮಾಂಡವಾದ ಈ ಪಕ್ಷಿಗಳ ಗುಂಪನ್ನು ನೋಡಿದರೆ ಕಾಶಿರಾಜ್ಯವೆಲ್ಲಾ ಚಿನ್ನದ ತಗಡು ಹಾಸಿದಂತಿತ್ತು. ಕಾಶಿರಾಜನು ಆಚ್ಚರಿಯಿಂದ ಈ ಸೊಬಗನ್ನು ನೋಡಿದನು. ಆ ಪಕ್ಷಿಗಳೆಲ್ಲಾ ತಾರಾಮಂಡಲದಲ್ಲಿ ಚಂದ್ರನೋಪಾದಿಯಲ್ಲಿ ಬೆಳಗುತ್ತಿದ್ದ ರಾಜಹಂಸ ಕಾಶೀರಾಜನ ಮನಸ್ಸನ್ನು ಸೂರೆಗೊಂಡಿತು. ಆತನು ದಿವ್ಯವಾದ ಪುಷ್ಪ ಹಾರಗಳನ್ನೂ, ಪೂಜಾ ದ್ರವ್ಯಗಳನ್ನೂ ತರಿಸಿ ರಾಜಹಂಸಕ್ಕೆ ಬಹಳ ಗೌರವದಿಂದ ಸ್ವಾಗತವಿತ್ತನು.

ಈ ವೈಭವಪೂರಿತವಾದ ಸ್ವಾಗತವನ್ನು ತುಂಬಾ ಆಪ್ಯಾಯನದಿಂದ ಸ್ವೀಕರಿಸಿತು ರಾಜಹಂಸ. ತನ್ನ ಪರಿವಾರದೊಂದಿಗೆ ಕೆಲವು ದಿನ ಅಲ್ಲೇ ಇದ್ದು, ಕಾಶಿರಾಜನ ಆತಿಥ್ಯವನ್ನು ಪಡೆದು ತನ್ನ ವಾಸಸ್ಥಳಕ್ಕೆ ಹಿಂತಿರುಗಿತು.

ನಂತರ ಕಾಶಿರಾಜನಿಗೆ ರಾಜಹಂಸದ ಮೇಲಿರುವ ಮಮತೆ ಮತ್ತಷ್ಟು ವೃದ್ಧಿ ಆಯಿತು. ಆತನ ಮನವೆಲ್ಲಾ ರಾಜಹಂಸದ ಕಡೆಗೇ ಹರಿಯುತಿತ್ತು. ದಿನಬೆಳಗಾದರೆ ಅದರದೇ ಯೋಚನೆ. ಯಾವಕ್ಷಣ, ಯಾವ ದಿಕ್ಕಿನಿಂದ ರಾಜಹಂಸವು ಬರುವುದೋ ಎಂದು ನೋಡುವನು.

ಒಂದು ದಿನ ಚಿತ್ರಕೂಟ ಪರ್ವತದಲ್ಲಿದ್ದ ಎರಡು ಘಟಾಣಿ ಹಂಸಗಳು ರಾಜಹಂಸನ

ಯಚ್. ನಾರಾಯಣರಾವ್

బళిసారి, "నాయకనే, నమగె సూర్య నొందిగె స్పర్ధె హూడబేకెందు అభి లాషె" ఎందు తమ్మ హృదయదల్లిద్ద ఉద్దేశవన్ను తిళిసిదవు.



ఆదన్ను కేళి " ఎల్యై కందమ్మగళిరా, సూర్యనొందిగె నీవు స్పర్ధెహూడువు దెందరేను భ్రాంతి? బహళ సోజిగ వాగిదె. సూర్యన వేగ ఎంతహదో నీవు తిళిదిల్ల. ఆదుదరిందలే నీవు అజ్ఞానదల్లి తొళలాడుత్తిరువిరి. నీవు ఆతనొందిగె ఓడువుదు హత్తట్టిగిరలి. ఈ స్పర్ధెయల్లి నిమగె ప్రయాసవూ, ప్రాణాపాయవూ సంభవిసబహుదు. ఆదుదరింద ఈ హుచ్చాటగళన్ను ఆడ బేడిరి" ఎందు హితబోధె మాడితు.

హంసమరిగళిగె ఈ హితవచన సరిగాణ లిల్ల. మత్తొందు దిన రాజహంసద బళిగె హోగి అనుమతి బేడిదవు. ఆగలూ అదే బుద్ధివాద హేళితు రాజహంస. అష్టక్కె ఆ మరిగళు సమ్మనిరలిల్ల. కెలవు దిన బిట్టుకొండు మత్తె రాజహంసన బళిగె హోగి కేళిదవు. ఈ బారియూ రాజ హంస అంగీకార నీడలిల్ల.

హీగాదరె కెలస సాగదెందూహిసి ఆ ఎరడు పుట్ట హంసగళు రాజహంసక్కె తిళియదంతె యుగంధర పర్వతశిఖరక్కె హారిహోదవు. ఆ శిఖర సూర్యమండల వన్ను తాకుత్తిరువుదో ఏనో ఎన్ను వష్టు ఎత్తరవాగిత్తు. ఆదుదరింద ఆ శిఖరదమేలె తంగిద్దు సూర్యనొందిగె స్పర్ధె హూడోణవెందు ఆ మరిగళు కాదు కుళితిద్దవు.

యథాప్రకార రాజహంస తన్న పరి వారవన్ను లెక్కమాడి నోడలు ఎరడు హంసగళు కడిమెయాగిద్దవు. కూడలే రాజహంసవు విషయవన్నెల్లా గ్రహిసి, తుంబా వ్యాకుల హొందితు. సుమ్మనె చింతిసి ప్రయోజనవిల్లవెందెణిసి, ఆ ఎళె మరిగళన్ను కాపాడలు నిర్ధరిసితు.

కూడలే అదూ సహ యుగంధర పర్వత శిఖరవన్ను సేరి ఆ ఎరడు మరిగళిగె

ಕಾಣದಂತೆ ಒಂದು ಕಡೆ ಕುಳಿತುಕೊಂಡಿತು. ಸೂರ್ಯೋದಯವಾದ ಕೂಡಲೇ ಮರಿ ಹಂಸಗಳು ಸೂರ್ಯನೊಂದಿಗೆ ಹಾರಲು ಪ್ರಾರಂಭಿಸಿದವು. ರಾಜಹಂಸವೂ ಸಹ ಅವುಗಳನ್ನು ಹಿಂಬಾಲಿಸಿಕೊಂಡು ಹೋಯಿತು.

ಆ ಎರಡು ಹಂಸಗಳಲ್ಲಿ ಕಿರಿಯ ಮರಿ ಮಧ್ಯಾಹ್ನದವರೆವಿಗೂ ಹಾರಿ, ರೆಕ್ಕೆಗಳಿಗೆ ಉರಿಯುಂಟಾಗಿ ಕೆಳಗೆ ಬೀಳುತಿತ್ತು. ಅದು ಹಾಗೆ ಬೀಳಲಿರುವಾಗ ರಾಜಹಂಸ ಕಾಣಿಸಲು "ರಾಜ, ನನಗೆ ಸಾಧ್ಯವಿಲ್ಲ. ಸೋತೆ" ಎಂದು ನಿಸ್ಪೃಹತೆಯಿಂದ ನುಡಿಯಿತು. ಆಗ ರಾಜಹಂಸವು "ಚಿಂತಿಸದಿರು ನಾನಿರುವೆನು" ಎಂದು ಸಮಾಧಾನಗೊಳಿಸಿ, ತನ್ನ ರೆಕ್ಕೆಗಳ ಮೇಲೆ ಕೂರಿಸಿಕೊಂಡು ಮನೆ ಸೇರಿಸಿತು.

ಕೊಂಚ ಹೊತ್ತಾದಮೇಲೆ ಇನ್ನೊಂದು ಮರಿಗೂಸಹ ರೆಕ್ಕೆಗಳಲ್ಲಿ ಸೂಜಿ ಚುಚ್ಚಿದಂತಾಗಿ ಬಾಧೆಯಿಂದ ನರಳುತಿತ್ತು. ತಿರುಗಿ ಬಂದ ರಾಜಹಂಸವನ್ನು ನೋಡಿದ ಕೂಡಲೇ ತನ್ನ ಗೋಳನ್ನು ಹೇಳಿಕೊಂಡಿತು. ರಾಜಹಂಸವು ಅದಕ್ಕೂ ಸಹ ಧೈರ್ಯ ಹೇಳಿ ತನ್ನ ರೆಕ್ಕೆಗಳ ಮೇಲೇರಿಸಿಕೊಂಡು ಚಿತ್ರಕೂಟಕ್ಕೆ ತಂದು ಸೇರಿಸಿತು.

ಈ ರೀತಿ ತನ್ನ ಪರಿವಾರದ ಎರಡು ಹಂಸಗಳು ಸೋತುಹೋದುದನ್ನು ಸಹಿಸಲಾರದೆ ರಾಜಹಂಸವು ತಾನೇ ಸ್ಪರ್ಧೆಗೆ ನಿಂತಿತು. ಹೇಳಲಸಾಧ್ಯವಾದ ವೇಗವುಳ್ಳ ರಾಜಹಂಸ ಹಾರಲು ಪ್ರಾರಂಭಿಸಿ, ತುಸಹೊತ್ತಿಗೆಲ್ಲಾ ಸೂರ್ಯಬಿಂಬವನ್ನು ಸೇರಿದುದಷ್ಟೇ ಅಲ್ಲದೆ



ಅದನ್ನು ದಾಟಿಯೂಬಿಟ್ಟಿತು. ಸೂರ್ಯನ ಶಕ್ತಿ ಎಷ್ಟಿದೆಯೋ ನೋಡೋಣವೆಂದು ಕೊಂಡಿತಾದರೂ ರಾಜಹಂಸಕ್ಕೆ ಈ ಸ್ಪರ್ಧೆ ಯಾಕೆ? ಇದರಿಂದ ತನಗೆ ಲಭಿಸುವ ಪ್ರಯೋಜನವಾದರೂ ಏನು?

ಆದುದರಿಂದ ಅದು ತನ್ನಿಷ್ಟ ಬಂದಂತೆ ಸ್ವಲ್ಪಹೊತ್ತು ಸುತ್ತಾಡಿ, ಕೊನೆಗೆ ಆಯಾಸಗೊಂಡು ಭೂಲೋಕಕ್ಕೆ ಬಂದು ಕಾಶೀರಾಜ್ಯವನ್ನು ಸೇರಿಕೊಂಡಿತು. ರಾಜಹಂಸಕ್ಕಾಗಿ ಎದುರು ನೋಡುತ್ತಿದ್ದ ರಾಜನು ಅದನ್ನು ಕಂಡ ಕೂಡಲೇ ತನ್ಮಯನಾದನು.

ರಾಜಹಂಸವನ್ನು ತನ್ನ ಚಿನ್ನದ ಸಿಂಹಾಸನದಮೇಲೆ ಕೂರಿಸಿ, ಚಿನ್ನದ ಹರಿವಾಣದಲ್ಲಿ ಪಾಯಸ, ಚಿನ್ನದ ಕಲಶದಿಂದ ತಂಪಾದ ಪಾನೀಯಗಳನ್ನು ತಂದು ಅದರ ಮುಂದೆ ಇಡಿಸಿದನು. ಅದು ಸ್ವಲ್ಪ ಸ್ಥಿಮಿತಗೊಂಡನಂತರ ರಾಜನು ಕುಶಲಪ್ರಶ್ನೆಗಳನ್ನು ಹಾಕಲು, ರಾಜಹಂಸವು ನಡೆದ ವಿಷಯವನ್ನೆಲ್ಲಾ ವಣಿರ್ಣಿಸಿದಂತೆ ಹೇಳಿತು.

ಆದರ ಮಾತುಗಳನ್ನು ಕೇಳಿ ರಾಜನು, "ಎಲೈ, ಪಕ್ಷಿರಾಜನೇ ಸೂರ್ಯನೊಂದಿಗೆ ಸ್ಪರ್ಧೆಹೂಡಿ ಆತನನ್ನು ಮೀರಿಸಿದ ನಿನ್ನ ಪ್ರಜ್ಞೆಯನ್ನು ನೋಡಬೇಕೆಂಬ ಕುತೂಹಲವುಂಟಾಗಿದೆ" ಎಂದ. ಆಗ ರಾಜನಿಗೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ತೋರಿಸಲು ನಿಶ್ಚಯಿಸಿ "ಎಲೈ ರಾಜನೇ, ನಿನ್ನ ರಾಜ್ಯದಲ್ಲಿ ಮಿಂಚು ಹೊಳೆಯುವುದನ್ನೂ ಮೀರಿಸಿ ಬಾಣ



ಬಿಡುವ ನಾಲ್ವರು ಬಿಲ್ಲುಗಾರರಿದ್ದರೆ ಅವರನ್ನು ಬರಹೇಳು" ಎಂದಿತು. ರಾಜನು ಬಿಲ್ಲುಗಾರರನ್ನು ಕಳೆಯಿಸಿದ.

ಉದ್ಯಾನದಲ್ಲಿ ಒಂದು ಚಚ್ಚೌಕವಾಗಿರುವ ಸ್ತಂಭವಿತ್ತು. ನಾಲ್ವರು ಬಿಲ್ಲುಗಾರರನ್ನು ಆ ಸ್ತಂಭದ ನಾಲ್ಕು ಮೂಲೆಗಳಲ್ಲೂ ನಿಲ್ಲಿಸುವಂತೆ ಹೇಳಿತು ರಾಜಹಂಸ. ತನ್ನ ಕೊರಳಿಗೆ ಒಂದು ಗಂಟೆಯನ್ನು ಕಟ್ಟಿಕೊಂಡು ಸ್ತಂಭದ ಮೇಲೆ ಕುಳಿತುಕೊಂಡು ಅದು ಹೀಗೆಂದಿತು: "ನಾನು ಸಂಜ್ಞೆಮಾಡಿದಾಕ್ಷಣ ನೀವು ನಾಲ್ವರೂ ಬಾಣಗಳನ್ನು ಬಿಡಿ. ನಾನು ಹಾರಿಹೋಗಿ ಪ್ರತಿಯೊಬ್ಬರ ಬಾಣವನ್ನು ತಂದು ಅವರವರ ಮುಂದಿಡುವೆನು. ಆದರೆ ನನ್ನ ಕೊರಳಲ್ಲಿರುವ ಗಂಟೆಯ ಧ್ವನಿ

ಯಿಂದ ಮಾತ್ರ ನನ್ನ ಚಲನವಲನೆಗಳನ್ನು ತಿಳಿದುಕೊಳ್ಳಬಲ್ಲಿರೇ ಹೊರತು ನನ್ನನ್ನು ಕಣ್ಣಿಂದ ನೋಡಲು ನಿಮಗೆ ಸಾಧ್ಯವಾಗದು" ಎಂದಿತು.

ಆ ಪ್ರಕಾರವೇ ಬಿಲ್ಲುಗಾರರು ಬಾಣಗಳನ್ನು ಬಿಡಲು ಮಿಂಚು ಹೊಳೆಯುವಷ್ಟರಲ್ಲಿ ನಾಲ್ಕು ಬಾಣಗಳನ್ನು ತಂದು ರಾಜಹಂಸವು ಆಯಾ ಬಿಲ್ಲುಗಾರನ ಮುಂದೆ ಇರಿಸಿತು. ರಾಜನೂ ಆತನ ಪರಿವಾರದವರೂ ಆಶ್ಚರ್ಯಪಟ್ಟರು.

"ರಾಜನೇ ನೋಡಿದೆಯಾ ನನ್ನ ವೇಗ? ಆದರೆ ನಾನು ಬಹುವೆಲ್ಲನೆ ಹಾರಿದಾಗಿನ ಕನಿಷ್ಠ ವೇಗವದು. ಇದರಿಂದ ಅತಿ ವೇಗವೆಂದರೆ ಇನ್ನೂ ಹೇಗಿರುವುದೋ ನೀನೇ ಊಹಿಸು" ಎಂದಿತು.

"ಪಕ್ಷಿರಾಜನೇ, ನಿನ್ನ ವೇಗದ ಅರಿವಾಯಿತು. ಆದರೆ ನಿನ್ನನ್ನೂ ಮೀರಿಸಿದ ವೇಗವುಳ್ಳವರು ಮತ್ತೆ ಯಾರಾದರೂ ಇರುವರೇ?" ಎಂದು ವಿನಯದಿಂದ ಕೇಳಿದ ರಾಜ. ಅದಕ್ಕೆ ಪಕ್ಷಿರಾಜನು "ಇಲ್ಲವೇನು? ನಾನು ನನ್ನ ಶಕ್ತಿಯನ್ನೆಲ್ಲಾ ವಿನಿಯೋಗಿಸಿ ಅತ್ಯಂತ ವೇಗವಾಗಿ ಹಾರಿದರೂ ನನಗಿಂತ ಸಾವಿರಪಾಲು ವೇಗವಾಗಿ ಓಡುವ ಮಹಾ ಶಕ್ತಿಯೊಂದಿದೆ. ಅದೇ 'ಕಾಲ' ವೆಂಬ ಸರ್ಪ. ಅನುಕ್ಷಣವೂ ಈ ಪ್ರಪಂಚದ ಎಲ್ಲ ಜೀವಿಗಳನ್ನು ವರ್ಣಿಸಲಾಗದಷ್ಟು ಪ್ರಚಂಡ ವೇಗದಿಂದ ನಾಶಮಾಡುತ್ತಿದೆ..." ಎಂದು ಹೇಳುತ್ತಿರುವಲ್ಲಿ, ರಾಜನು ಭಯದಿಂದ ಕಂಪಿಸಿದನು. ಆಗ ರಾಜಹಂಸ ರೂಪದಲ್ಲಿದ್ದ ಬೋಧಿಸತ್ವನು ರಾಜನಿಗೆ ಧೈರ್ಯಬರುವಂತೆ ತತ್ವಬೋಧೆ ಮಾಡಿದ:

"ಎಲೈ ರಾಜನೇ, ಕಾಲಸರ್ಪವೆಂಬುದೊಂದಿದೆ ಎಂದು ತಿಳಿದುಕೊಂಡವರು ಭೀತಿಪಡಬೇಕಾದ ಪ್ರಮೇಯವಿಲ್ಲ. ನೀತಿವಂತನಾಗಿ, ಧರ್ಮಾತ್ಮನಾಗಿ ಪರಿಪಾಲನೆ ಸಾಗಿಸುವಷ್ಟು ದಿನ ನಿನಗೆ ಯಾರಿಂದಲೂ ಭಯವಿರುವುದಿಲ್ಲ. ಆದುದರಿಂದ ನಿನ್ನ ಕರ್ತವ್ಯವನ್ನು ನೀನು ಸರಿಯಾಗಿ ನೆರವೇರಿಸು" ಎಂದು ಹೇಳಿ ಬೋಧಿಸತ್ವನು ಚಿತ್ರಕೂಟ ಪರ್ವತಕ್ಕೆ ಮರಳಿಹೋದನು.






## 15

[ಶಿವದತ್ತನನ್ನು ಹುಡುಕಿಕೊಂಡು ಹೊರಟ ಸಮರಸೇನನು ಅದೃಷ್ಟವಶಾತ್ ತನ್ನ ಸೈನಿಕರನ್ನು ಮೊಸಳೆಯ ಬಾಯಿಗೆ ಬೀಳದಂತೆ ಕಾಪಾಡಿದನಷ್ಟೇ? ಅವರಿಂದ ವ್ಯಾಘ್ರದತ್ತ ಎತ್ತ ಹೊರಟಿರುವನೆಂದು ತಿಳಿದುಕೊಂಡ. ಶಿವದತ್ತನ ಮುಂಜಾಗ್ರತೆಯ ಪತ್ರ ಆತನ ಕಣ್ಣಿಗೆ ಬಿತ್ತು. ಅದೇ ಸಮಯದಲ್ಲಿ ಆತನನ್ನು ವ್ಯಾಘ್ರದತ್ತನು ಎದುರಿಸಿದನು. ತರುವಾಯ—]

ಸಮರಸೇನನಿಗೆ ತಮ್ಮ ಮೇಲೆ ಬಾಣಬಿಡುತ್ತಿರುವವರು ಯಾರೆಂದು ತಿಳಿದುಕೊಳ್ಳಲು ಬಹಳಹೊತ್ತು ಹಿಡಿಯಲಿಲ್ಲ. 'ವ್ಯಾಘ್ರದತ್ತ ಕಿ ಜೈ' 'ವ್ಯಾಘ್ರಮಂಡಲ್ ಕಿ ಜೈ' ಎಂಬ ಜಯ ಜಯಾಕಾರಗಳೂ, ಕೇಕೆಗಳೂ ಆ ಪ್ರದೇಶದಲ್ಲೆಲ್ಲಾ ಪ್ರತಿಧ್ವನಿಸುತ್ತಿದ್ದವು.

"ಇವರು ವ್ಯಾಘ್ರದತ್ತನ ಭಟರು. ನಾವಿರುವ ಸ್ಥಳವನ್ನು ಕಂಡುಹಿಡಿದು ಹಠಾತ್ತನೆ ಧಾಳಿಮಾಡಿ ನಮ್ಮೆಲ್ಲರನ್ನೂ ಯಮಪುರಿಗೆ ಕಳುಹಿಸಲು ಪ್ರಯತ್ನಿಸುತ್ತಿರುವರು. ಹುಷಾರಾಗಿರಿ" ಎಂದು ಸಮರಸೇನನು ತನ್ನ ಸೈನಿಕರಿಗೆ ಎಚ್ಚರಿಕೆ ಕೊಟ್ಟನು. ಆಸಮಯದಲ್ಲಿ ವ್ಯಾಘ್ರದತ್ತನ ಭಟರು ಬೆಟ್ಟಗಳ ಹಿಂದೆ ಅವಿತುಕೊಂಡು ಸಮರಸೇನನಮೇಲೂ, ಆತನ ಸೈನಿಕರಮೇಲೂ ಏಕಪ್ರಕಾರವಾಗಿ ಬಾಣಪ್ರಯೋಗ ಮಾಡುತ್ತಿದ್ದರು. ಈ ಪರಿಸ್ಥಿತಿಯಲ್ಲಿ ಜೀವಸಹಿತ ಹೊರಬೀಳಬೇಕೆಂದರೆ ಬಂಡೆಗಳ ಮರೆಯಲ್ಲಿ ಸರಿಯುತ್ತಾ ಆ ಸ್ಥಳದಿಂದ ಜಾರಿಕೊಳ್ಳುವುದು ಹೊರತು ಅನ್ಯ ಮಾರ್ಗವಿಲ್ಲವೆಂದು ಆತನಿಗೆ ತೋರಿತು.

ಸಮರಸೇನನೊಂದಿಗೆ ಸೈನಿಕರೂ ಸಹ ನಿಶ್ಶಬ್ದವಾಗಿ ಬಂಡೆಗಳ ಮರೆಯಲ್ಲಿ ಸುಳಿ



ಯುತ್ತಾ ಎದುರಿನಲ್ಲಿದ್ದ ಸುರಂಗದತ್ತ ಸಾಗ ತೊಡಗಿದರು. ಆ ಸುರಂಗ ಎಲ್ಲಿಗೆ ಹೋಗು ವುದೋ ಎಂಬ ಸಂಶಯ ಅವರನ್ನು ಬಾಧಿಸು ತಿತ್ತು. ಹೇಗಾದರೂ ವ್ಯಾಘ್ರದತ್ತನು ಬೀಸಿದ ಬಲೆಯಿಂದ ತಪ್ಪಿಸಿಕೊಳ್ಳುವುದರಲ್ಲೇ ಅವ ರೆಲ್ಲರೂ ನಿರತರಾಗಿದ್ದರು.

ಕಡೆಗೆ ಎಲ್ಲರೂ ಒಂದು ಕತ್ತಲೆ ಗುಹೆ ಯನ್ನು ಸೇರಿದರು. ವ್ಯಾಘ್ರದತ್ತನ ಭಟರ ಅರಚಾಟ ಕಿರಿಚಾಟಗಳು ಕಾಲಕ್ರಮೇಣ ಕಡಿಮೆಯಾದುವು. ಅವರೆಲ್ಲರೂ ತಮ್ಮನ್ನು ಹುಡುಕುತ್ತಾ ಬೇರೊಂದು ದಾರಿಹಿಡಿದಿರ ಬಹುದೆಂದು ಸಮರಸೇನನು ಭಾವಿಸಿದನು.

ಆ ವೇಳೆಗಾಗಲೇ ಹೊತ್ತೇರಿ ನಡು ಮಧ್ಯಾಹ್ನವಾಗಿತ್ತು. ಸಮರಸೇನನು ಕತ್ತ



ಲಾವರಿಸಿದ್ದ ಗುಹೆಯಲ್ಲಿ ತಡವರಿಸುತ್ತಾ ತುಸ ದೂರ ಸಾಗಿಹೋದನು. ಆದರೆ ಆತನಿಗೆ ಸುರಂಗದ ಮತ್ತೊಂದು ಕೊನೆಯಿಂದ ಸೂರ್ಯನ ಬೆಳಕು ಕಾಣಿಸಿತು. ಆತನು ಮತ್ತಷ್ಟು ಮುಂದೆ ನಡೆದು ಗುಹೆಯ ಹೊರ ಭಾಗವನ್ನು ಸೇರಿದನು.

ಸಮರಸೇನನು ತನ್ನ ಕಣ್ಣುಗಳನ್ನು ತಾನೇ ನಂಬದಾದನು. ಇದೇನು ಕನಸೊ, ನೆನಸೊ ಎಂದೆನ್ನಿಸಿತು. ಆತನ ಇದಿರಾಗಿ ಶಿವದತ್ತನು ಪಠದಲ್ಲಿ ತೋರಿಸಿದ್ದ ಶಿಥಿಲ ಗೃಹಗಳು ಕಾಣಿಸಿದವು. ಯಾವುದೋ ಒಂದು ಮಹಾನಗರವು ಭೂಕಂಪದಿಂದ ಸರ್ವನಾಶವಾಗಿ ಆ ಭಾರಿ ಭವನದ ಗೋಡೆ ಗಳು ಕುಸಿದು, ಸ್ತಂಭಗಳು ಬಿರುಕುಬಿಟ್ಟಿರು ವುದೂ ಆತನಿಗೆ ಕಾಣಿಸಿತು.

ಅದು ಶಿವದತ್ತನು ಪಠದಲ್ಲಿ ಸೂಚಿಸಿದ ಶಿಥಿಲ ನಗರವೆಂದೆನ್ನಲು ಸಂದೇಹವೇ ಇರ ಲಿಲ್ಲ. ಶಿವದತ್ತನು ಇಲ್ಲೇ ಎಲ್ಲೋ ಅಡಗಿ ಕೊಂಡಿರಬೇಕು. ಧೈರ್ಯವಹಿಸಿ ತಾನು ಮುಂದೆ ನುಗ್ಗುವುದೇ ಒಳಿತೆಂದು ಭಾವಿಸಿದ ಸಮರಸೇನ. ಆತನ ಸೈನಿಕರೂ ಸಹ ಆಶ್ಚರ್ಯದಿಂದ ಆ ಪಾಳುಬಿದ್ದ ನಗರದಕಡೆ ಗೆಯೇ ನೋಡುತ್ತಿದ್ದರು.

ಮುಂದೇನು ಮಾಡಬೇಕೆಂದು ಸಮರ ಸೇನನು ನಿರ್ಧರಿಸುವಷ್ಟರಲ್ಲಿಯೇ ಆ ಪ್ರದೇಶ ವೆಲ್ಲಾ ಅದುರಿ ಬೀಳುವಂತೆ ಶಂಖನಾದ ಮತ್ತು ಜಯಕಾರ ಧ್ವನಿಗಳಿಂದ ತುಂಬಿ





ಹೋಯಿತು. ಮರುಕ್ಷಣವೇ ಸುಮಾರು ಐವತ್ತು ಮಂದಿ ಭಟರೊಂದಿಗೆ ವ್ಯಾಘ್ರದತ್ತನು ಆ ಹಾಳುಬಿದ್ದ ಭವನಗಳಕಡೆಗೆ ನಡೆದು ಬರುತ್ತಿದ್ದ.

ಸಮರಸೇನನು ಸೈನಿಕರನ್ನು ಎಚ್ಚರಿಸಿ, ವ್ಯಾಘ್ರದತ್ತನು ಎತ್ತ ಹೋಗುವನೋ ಎಂದು ಎವೆಯಿಕ್ಕದೆ ನೋಡುತ್ತಿದ್ದನು. ವ್ಯಾಘ್ರದತ್ತನ ನಡವಳಿಕೆ ನೋಡಿದರೆ ಆತನು ತಮ್ಮ ವಿಷಯವನ್ನೇ ಮರೆತಂತೆ ತೋರುತ್ತಿತ್ತು.

ತಾನು ಸಾಧಿಸಬೇಕೆಂದಿದ್ದ ಕಾರ್ಯವನ್ನು ಸಾಧಿಸಿದವನಂತೆ ಧಿಮಾಕಿನಿಂದ ಮುಂದೆ ನಡೆಯುತ್ತಿದ್ದನು. ಭಟರು ನಗುತ್ತಾ, ಒಬ್ಬರಿಗೊಬ್ಬರು ಹಾಸ್ಯಮಾಡಿಕೊಳ್ಳುತ್ತಾ ಆತನನ್ನು ಹಿಂಬಾಲಿಸುತ್ತಿದ್ದರು.

ಶಿವದತ್ತನಿರುವಸ್ಥಳವನ್ನು ಪತ್ತೆಹಚ್ಚಿ ಆತನನ್ನು ಬಂಧಿಸಿರಬಹುದೆಂಬ ಅನುಮಾನ ಸಮರಸೇನನಿಗುಂಟಾಯಿತು. ಆದರೆ ಭಟರ ಸಂಗಡ ಸೆರೆಯಾಳುಗಳು ಯಾರೂ ಇದ್ದಂತೆ ಕಾಣಬರಲಿಲ್ಲ. ಬಹುಶಃ ಅಪೂರ್ವಶಕ್ತಿಯುಳ್ಳ ಶಾಕ್ತೇಯನ ತ್ರಿಶೂಲವಿರುವ ಜಾಗ ಅವನಿಗೆ ತಿಳಿದಿದ್ದರೂ ಇರಬಹುದು ಎಂದೆನ್ನಿಸಿತು ಸಮರಸೇನನಿಗೆ.

ವ್ಯಾಘ್ರದತ್ತನು ಶಿಥಿಲವಾದ ಭವನಗಳ ಕಡೆ ತನ್ನ ಸೇನೆಯನ್ನು ನಡೆಯಿಸುತ್ತಿದ್ದ ಅಂಶವನ್ನು ನೋಡಿದರೆ ಅವನು ತಾವು ಹೋಗಬೇಕೆಂದಿರುವ ಸ್ಥಳವನ್ನು ಈ ಮೊದಲೇ ನಿರ್ಧರಿಸಿರುವಂತೆ ತೋರುತಿತ್ತು. ಇಂತಹ ಸಮಯಕ್ಕೆ ತವಕದಿಂದ ಕಾದಿದ್ದ





ಸಮರಸೇನನು ಶಿಲೆಗಳ ಹಿಂದೆಯೇ ಸರಿಯುತ್ತಾ ತನ್ನ ಸೈನಿಕರೊಂದಿಗೆ ಒಂದು ಶಿಥಿಲವಾಗಿದ್ದ ಭಾರಿಭವನದ ಪ್ರಾಂಗಣವನ್ನು ಸೇರಿಕೊಂಡ. ಅಲ್ಲಿ ಅರ್ಧಂಬರ್ಧವಾಗಿ ಬಿರುಕುಬಿಟ್ಟು, ಕುಸಿದು ಬಿದ್ದಿರುವ ಸ್ತಂಭಗಳ ಮರೆಯಲ್ಲಿ ನಿಂತನು. ಅಲ್ಲಿಂದ ಅವನು ವ್ಯಾಘ್ರದತ್ತನ ಚಟುವಟಿಕೆಗಳನ್ನು ಕುತೂಹಲದಿಂದ ಈಕ್ಷಿಸುತ್ತಿದ್ದನು.

ಭಟರ ಮುಂದೆ ನಡೆಯುತ್ತಿದ್ದ ವ್ಯಾಘ್ರದತ್ತನು ಇದ್ದಕ್ಕಿದ್ದಂತೆಯೇ ಒಂದು ಕಡೆ ತಟಕ್ಕನೆ ನಿಂತು "ವ್ಯಾಘ್ರ ಯೋಧರೇ ನಮ್ಮ ಶ್ರಮ ಫಲಿಸುವ ಶುಭದಿನ ಬಂದಿದೆ. ನಿಮ್ಮಲ್ಲಿ ಪ್ರತಿಯೊಬ್ಬನನ್ನೂ ಒಂದೊಂದು ದೇಶದ ರಾಜನನ್ನಾಗಿ ಮಾಡುವೆನೆಂದು ವಾಗ್ದಾನ



ಮಾಡುವೆನು. ಆ ವಾಗ್ದಾನ ಉಳಿಸಿಕೊಳ್ಳುವ ಜವಾಬ್ದಾರಿ ನನ್ನದು. ಆದರೆ ಈಗ ನೀವೆಲ್ಲರೂ ಮತ್ತೊಂದು ಸಾಹಸವಾದ ಕಾರ್ಯ ಮಾಡಬೇಕಾಗುವುದು" ಎಂದು ಗಂಭೀರವಾಗಿ ನುಡಿದನು. "ನಾವು ಎಂತಹ ಸಾಹಸ ಕಾರ್ಯಕ್ಕೂ ಸಿದ್ಧರಿದ್ದೇವೆ. ಏನು ಮಾಡಬೇಕೋ ಅಪ್ಪಣೆಕೊಡಿ" ಎಂದರು ಭಟರು. ಅವರ ಧ್ವನಿಯಲ್ಲಿ ಕಾತುರತೆ ತುಂಬಿತ್ತು.

ವ್ಯಾಘ್ರದತ್ತನು ಮುಗುಳುನಗೆ ಬೀರಿ "ಈ ಶಿಥಿಲಗೃಹದಲ್ಲಿ ನಮ್ಮ ಕೋರಿಕೆಗಳು ನೆರವೇರಲಿವೆ. ಅದೋ ಅತ್ತ ಕಾಣಿಸುತ್ತಿರುವ ಭವನವನ್ನು ನೋಡಿದಿರಷ್ಟೆ? ಅದರ ಸಿಂಹದ್ವಾರ ಕುಸಿದುಬಿದ್ದು ಕಲ್ಲುಮಣ್ಣುಗಳಿಂದ ಮುಚ್ಚಿಹೋಗಿದೆ. ನೀವು ಅಡ್ಡವಾಗಿ ಬಿದ್ದಿರುವ ಕಲ್ಲುಬಂಡೆಗಳನ್ನು ಸ್ತಂಭಗಳನ್ನು ಪಕ್ಕಕ್ಕೆ ಸರಿಸಿ ಮಾರ್ಗಮಾಡಿ. ನಾವು ಕಂಡುಹಿಡಿಯಬೇಕಾದ ಅಮೂಲ್ಯವಸ್ತು ಈ ಭವನದಲ್ಲೇ ಇದೆ. ಈ ಸಿಂಹದ್ವಾರದಿಂದಲೇ ಒಳಗೆ ಪ್ರವೇಶ ಮಾಡಬೇಕು" ಎಂದ.

ವ್ಯಾಘ್ರದತ್ತನು ಈರೀತಿ ಹೇಳಲು ಭಟರಲ್ಲಿ ನವಚೈತನ್ಯವುಂಟಾಯಿತು. ಉತ್ಸಾಹ ಇಮ್ಮಡಿಯಾಯಿತು. ಅವರು ಬಹಳ ಹುರುಪಿನಿಂದ ಆ ಪಾಳು ಭವನವನ್ನು ಸಮೀಪಿಸಿದರು. ಕೆಲವರು ಹಾರೆಗಳನ್ನು ಕೈಗೆದುಕೊಂಡು ದ್ವಾರಕ್ಕೆ ಅಡ್ಡಲಾಗಿ ಬಿದ್ದಿದ್ದ ಭಾರಿಭಾರಿ ಶಿಲೆಗಳನ್ನು ಪಕ್ಕಕ್ಕೆ ಜೋಡಿಸುತ್ತಿದ್ದರು. ಭಟರು ಉತ್ಸಾಹದಲ್ಲಿ, ದುರಾಶೆಯಲ್ಲಿ



ಮುಳುಗಿ ತಮಗೆ ಒದಗಬಹುದಾದ ಪ್ರಮಾದವನ್ನು ಗ್ರಹಿಸದಾದರು. ಶಿಥಿಲವಾದ ಆ ಭವನದ ಗೋಡೆಗಳು, ಸ್ತಂಭಗಳು ತುಸ ಅದುರಿದರೆ ಸಾಕು; ಪಕ್ಕಕ್ಕೆ ಒರಗಿ ಬೀಳುವ ಸ್ಥಿತಿಯಲ್ಲಿದ್ದವು. ಇದು ಯಾರಿಗೂ ತೊತ್ತಾಗಲಿಲ್ಲ.

ದೂರದಲ್ಲಿ ನಿಂತು ಇದೆಲ್ಲವನ್ನೂ ಗಮನಿಸುತ್ತಿದ್ದ ಸಮರಸೇನ. ವ್ಯಾಘ್ರದತ್ತನ ಆಜ್ಞೆಯನ್ನು ಪಾಲಿಸುತ್ತಿದ್ದ ಭಟರು ಯಾವ ಗೋಡೆಯೋ, ಸ್ತಂಭವೋ ಕುಸಿದು ಬೀಳುವುದರಿಂದ ಆಪತ್ತಿಗೀಡಾಗುವರೆಂಬುದು ನಿರ್ವಿವಾದ ವಿಷಯವೆಂಬುದನ್ನು ಗ್ರಹಿಸಿದನು. ವ್ಯಾಘ್ರದತ್ತನು ತುಸದೂರ ನಿಂತು ಬಂಡೆಗಳನ್ನು ಪಕ್ಕಕ್ಕೆ ಸುರಿಸುತ್ತಿದ್ದ ಭಟರನ್ನು ಹುರಿದುಂಬಿಸುತ್ತಿದ್ದನು. ಆಗಾಗ ಅವನು



ಭವನದ ಸುತ್ತುಮುತ್ತ ನೋಡುತ್ತಿರುವುದನ್ನು ಕಂಡರೆ ಆತನು ಮುಂದಾಗುವ ಪ್ರಮಾದವನ್ನು ಅರಿತಿರಬಹುದೆಂದು ಸಮರಸೇನನು ತಿಳಿದುಕೊಂಡನು.

ವ್ಯಾಘ್ರದತ್ತನು ಬೇಕೆಂತಲೇ ತನ್ನ ಭಟರನ್ನು ಇಂತಹ ಅಪಾಯಕ್ಕೆ ಸಿಲುಕಿಸುತ್ತಿರುವಂತಿತ್ತು. ಸಮರಸೇನನು ಈ ರೀತಿ ಊಹಿಸುತ್ತಿರಲು, ಪಳಪಳಾರನೆ ಆ ಪಾಳುಬಿದ್ದ ಮನೆ ಒಮ್ಮೆಗೇ ಕುಸಿಯಿತು.

ಸ್ತಂಭಗಳ ಅಡಿ, ಗೋಡೆಗಳ ಕೆಳಗೆಬಿದ್ದ ವ್ಯಾಘ್ರದತ್ತನ ಭಟರು ಹಾಹಾಕಾರ ಮಾಡುತ್ತಾ ತಕ್ಷಣ ಮರಣಹೊಂದಿದರು. ಅದೃಷ್ಟವಶಾತ್ ಪ್ರಮಾದದಿಂದ ಪಾರಾದ ಕೆಲವು ಭಟರು ಗಾಯಗೊಂಡಿದ್ದರು.

ಭೀಕರಸಂಘಟನೆ ಎವೆಯಲುಗಿಸುವಷ್ಟರಲ್ಲಿ ನಡೆದುಹೋಯಿತು. ಪ್ರಾಣದಿಂದ ಹೊರಬಿದ್ದ ಕೆಲವು ಭಟರೊಂದಿಗೆ ವ್ಯಾಘ್ರದತ್ತನು ಕೊಂಚದೂರ ಓಡಿಹೋಗಿ ತಟಸ್ಥನಾಗಿ ನಿಂತುಬಿಟ್ಟನು. ತನ್ನ ನಂಬುಗೆಯ ಭಂಟರು ದುರ್ಮರಣಕ್ಕೆ ಈಡಾದರೂ ಸಹ ಆತನು ಕೊಂಚವಾದರೂ ಕಳವಳಪಡಲಿಲ್ಲ.

"ವ್ಯಾಘ್ರೇಶ್ವರಿಗೆ ಏನೋ ಅಪಚಾರ ನಡೆದಿದೆ. ಅದರಿಂದಲೇ ಅಷ್ಟು ಜನ ಭಟರು ಬಲಿಯಾದರು. ಇನ್ನು ನಮಗೆ ಯಾವ ಭಯವೂ ಇಲ್ಲ. ಧೈರ್ಯವಾಗಿರಿ" ಎಂದು ಆತನು ಉಳಿದ ಇಪ್ಪತ್ತು ಜನ ಭಟರಿಗೆ ಧೈರ್ಯ ಹೇಳಿದನು.









ಭಟರು ನಡುಗುತ್ತಾ ತಮ್ಮ ನಾಯಕನ ಮಾತಿಗೆ ತಲೆ ಯಾಡಿಸಿದರು. ಆಗ ವ್ಯಾಘ್ರ ದತ್ತನು ತನ್ನ ಹತ್ತಿರವಿದ್ದ ಒಂದು ಪಠವನ್ನು ಅವರಿಗೆ ತೋರಿಸಿ "ಅಪೂರ್ವ ಶಕ್ತಿಯುಳ್ಳ ಶಾಕ್ತೇಯನ ತ್ರಿಶೂಲವಿರುವ ಸ್ಥಳವನ್ನು ನಿಮಗೆ ಹೇಳುವೆನು. ಅದರ ಪ್ರಭಾವದಿಂದ ಈ ಪ್ರಪಂಚಕ್ಕೆಲ್ಲಾ ನಾವೇ ರಾಜಾಧಿ ರಾಜರು. ನಮ್ಮ ಭಂಟರಾದ ನೀವು ಅದೃಷ್ಟ ವಂತರು. ಆ ತ್ರಿಶೂಲವಿರುವ ಸ್ಥಳ ಈ ಪಠ ದಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ. ಆನೆಗಳ ವನದಲ್ಲಿ, ವಿಷವೃಕ್ಷಕ್ಕೆ ನೂರಡಿ ಅಂತರದಲ್ಲಿ, ಮೃತವೀರರ ಸಮಾಧಿಯ-ಅಡಿ, ಗುರು ದ್ರೋಹಿಯ ಅಸ್ತಿಪಂಜರದಲ್ಲಿ ಶಾಕ್ತೇಯನ ತ್ರಿಶೂಲವನ್ನು ಬಚ್ಚಿಡಲಾಗಿದೆ" ಎಂದ.

ಮರೆಯಲ್ಲಿ ಅಡಗಿನಿಂತಿದ್ದ ಸಮರಸೇನನು ಈ ಮಾತುಗಳನ್ನು ಆಲಿಸಿ ಭಯಾಶ್ಚರ್ಯ ಗಳಿಂದ ಕಂಪಿಸಿದನು. ಯಾವ ಅಪೂರ್ವ ಶಕ್ತಿ ಯುಳ್ಳ ತ್ರಿಶೂಲಕ್ಕಾಗಿ ಈ ಮಾಯಾದ್ವೀಪ ದಲ್ಲಿ ಇಷ್ಟೊಂದು ಹತ್ಯೆ, ಯುದ್ಧಗಳು ಸಂಭ ವಿಸುತ್ತಿವೆಯೋ ಆ ತ್ರಿಶೂಲವು ಕಡೆಗೆ ಈ ವ್ಯಾಘ್ರದತ್ತನಂತಹ ದುರುಳನ ಪಾಲಾಗು ವುದರಲ್ಲಿದೆ! ಎಂತಹ ಪರಿಸ್ಥಿತಿ!

ಮುಂದಿನ ಕರ್ತವ್ಯವೇನು ಎಂಬ ಪ್ರಶ್ನೆ ಸಮರಸೇನನನ್ನು ಬಾಧಿಸಿತು.

ಶಿವದತ್ತನು ಏನಾದ? ಆತನಿಗೆ ತ್ರಿಶೂಲ ವಿರುವ ಸ್ಥಳ ತಿಳಿದಿದೆಯೇ? ತನ್ನ ಹತ್ತಿರ ವಿರುವ ಆರೇ ಆರು ಜನರೊಂದಿಗೆ ವ್ಯಾಘ್ರ ದತ್ತನ ಮೇಲೆ ಬೀಳುವುದು ಕ್ಷೇಮಕರವೇ? ಸಮರಸೇನನು ಏನೊಂದನ್ನೂ ನಿರ್ಧರಿಸ ಲಾರದೆಹೋದನು. ಒಂದುಸಾರಿ ವ್ಯಾಘ್ರ ದತ್ತನ ಕೈಗೆ ಆ ತ್ರಿಶೂಲ ಸಿಕ್ಕಿಬಿಟ್ಟರೆ, ಆತನನ್ನು ಎದುರಿಸಲು ಯಾರಿಂದಲೂ ಸಾಧ್ಯ ವಿಲ್ಲ. ಮಂತ್ರತಂತ್ರ ವಿದ್ಯೆಗಳಲ್ಲಿ ಸಾಟಿ ಯಿಲ್ಲದವರೆಂದು ಭಾವಿಸಿರುವ ಏಕಾಕ್ಷಿ, ಚತುರ್ನೇತ್ರರೂ ಸಹ ಆತನ ದಾಸಾನು ದಾಸರಾಗಬೇಕಾಗುವುದು. ಮತ್ತೇನಿದೆ? ಧನರಾಶಿಯಿಂದ ತುಂಬಿರುವ ನಾವೆ, ಅದನ್ನು ಕಾಪಾಡುತ್ತಿರುವ ನಾಗಕನ್ಯೆ ಸಹ ಆತನ ವಶ ವಾಗಲೇಬೇಕು. ಬೇರೆ ವಿಧಿಯಿಲ್ಲ.

ಇಂತಹ ಆಪತ್ಸಮಯದಲ್ಲಿ ತನಗೆ ಸಹಾಯ ಮಾಡಬಲ್ಲವನು ಚತುರ್ನೇತ್ರನು



ಹೊರತು ಮತ್ತೆ ಯಾರೂ ಇಲ್ಲ. ಆದರೆ ಚತು ರ್ನೇತ್ರನಿಗೆ ಈ ಸ್ಥಿತಿ ತಿಳಿಯುವುದೆಂತು?

ನಾಗಕನ್ಯೆಗಾಗಿ ಪ್ರಯತ್ನಿಸುತ್ತಿರುವ ಆತ ನಿಗೆ ಶಾಕ್ತೇಯನ ಶಕ್ತಿವಂತವಾದ ತ್ರಿಶೂಲದ ವಿಷಯ ತಿಳಿದಿದೆಯೇ? ಆ ತ್ರಿಶೂಲವನ್ನು ಸಂಪಾದಿಸಿಬಿಟ್ಟರೆ ಈ ದ್ವೀಪವನ್ನು ಮಾತ್ರವೇ ಅಲ್ಲ, ಪ್ರಪಂಚವನ್ನೇ ಜಯಿಸಬಹುದು.

ಸಮರಸೇನನು ಈ ಪರಿಯಾಗಿ ಆಲೋ ಚನೆಯಲ್ಲಿರುವಾಗ ವ್ಯಾಘ್ರದತ್ತನ ಕಂಚಿ ನಂತಹ ಕಂಠಸ್ವರ ಕೇಳಿಸಿತು:

"ನಾಳೆ ಮಹಾ ಪರ್ವದಿನ. ಅಮಾವಾಸ್ಯೆ ಭಾನುವಾರ. ಆದುದರಿಂದ ಈ ರಾತ್ರಿ ಇಲ್ಲಿಯೇ ವಿಶ್ರಾಂತಿ ಪಡೆಯೋಣ. ನಾಳೆರಾತ್ರಿ ಸರಿಯಾಗಿ ಒಂದು ಗಂಟೆಗೆ ನಾವು ಆನೆಗಳ ವನವನ್ನು ಪ್ರವೇಶಿಸಬೇಕು."

ವ್ಯಾಘ್ರದತ್ತನು ಈರೀತಿ ಭಟರೊಂದಿಗೆ ಹೇಳಿ ಅಲ್ಲಿದ್ದ ಒಂದು ಬಂಡೆಯಮೇಲೆ ಕುಳಿತು ಕೊಂಡ. ಭಟರೂ ಸಹ ತಮ್ಮ ಆಯುಧ ಗಳನ್ನು ಕೆಳಗಿಟ್ಟು ನಾಯಕನ ಸುತ್ತಲೂ ಚಕ್ರಾಕಾರದಲ್ಲಿ ಕುಳಿತುಕೊಂಡರು.

ಸಮರಸೇನನಿಗೆ ವ್ಯಾಘ್ರದತ್ತನ ಮಾತು ಗಳಿಂದ ಹುಸ ಆಶೆ ಜನಿಸಿತು. ಇನ್ನೂ ಇಪ್ಪ ತ್ನಾಲ್ಕು ಗಂಟೆಗಳ ಅವಧಿಯಿದೆ. ಈ ಸಮಯ ದಲ್ಲಿ ಯಾವುದೋ ಒಂದು ರೀತಿ - ಕೊನೆಗೆ ನಿದ್ದೆಮಾಡುತ್ತಿರುವ ವ್ಯಾಘ್ರದತ್ತನ ಮೇಲೆ ಏಕಾಏಕಿ ಬಿದ್ದಾದರೂ ಕೊಲ್ಲಬೇಕು. ಪ್ರಸ್ತುತ ತಾನೂ ಮತ್ತು ತನ್ನ ಭಟರೂ ವಿಶ್ರಾಂತಿ ಹೊಂದಬಹುದು.

ಹೀಗೆ ಆಲೋಚಿಸುತ್ತಾ ಸಮರಸೇನನು ಗಿರ್ರನೆ ಹಿಂದಕ್ಕೆ ತಿರುಗಿದ. ಹಾಗೆ ತಿರುಗು ವಾಗ ಆತನು ಆತುಕೊಂಡಿದ್ದ ಅರ್ಧಶಿಲೆ ಕೊಂಡಿದ್ದ ಕಲ್ಲುಸ್ತಂಭ ಭಾರಿಶಬ್ದ ಮಾಡುತ್ತಾ ಕೆಳಗೆ ಉರುಳಿಬಿದ್ದಿತು.

ಆ ಧ್ವನಿ ಕೇಳಿದಕೂಡಲೇ ಏಟುತಿಂದ ಹೆಬ್ಬುಲಿಯಂತೆ ವ್ಯಾಘ್ರದತ್ತ ಗಭಾಲನೆ ತಿರುಗಿ ನೋಡಿದ.

ಅವನ ತೀಕ್ಷ್ಣವಾದ ದೃಷ್ಟಿನೆಟ್ಟಗೆ ಸಮರ ಸೇನನು ಅವಿತಿಟ್ಟುಕೊಂಡಿದ್ದ ಪಾಳುಭವನದ ಕಡೆಗೇ ಹರಿಯಿತು!!

[ಇನ್ನೂ ಇದೆ]






# ಹುಂಬ ಇವಾನ್

ಅನೇಕ ವರ್ಷಗಳ ಹಿಂದೆ ರಷ್ಯಾದೇಶದಲ್ಲಿ ಒಬ್ಬ ಒಕ್ಕಲಿಗನಿಗೆ ಮೂವರು ಮಕ್ಕಳಿದ್ದರು. ಅವರಲ್ಲಿ ಕೊನೆಯವನ ಹೆಸರು ಇವಾನ್. ಅವನೊಬ್ಬ ತಿಳಿಗೇಡಿ. ಅದರಿಂದ ಅವನ ತಾಯಿ ಅವನಿಗೆ ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ. ಹಿರಿಯ ಮಕ್ಕಳಿಬ್ಬರೂ ದೊಡ್ಡವರಾಗಿ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದಾಗ ಇವಾನನನ್ನು ಆಕೆ ತನ್ನ ಸಹಾಯಕ್ಕಾಗಿ ಮನೆಯಲ್ಲೆ ಇರಿಸಿಕೊಂಡಳು.

ಒಂದು ದಿನ ಬೆಳಗ್ಗೆ ಅಣ್ಣಂದಿರಿಬ್ಬರೂ ಕುರಿಮೇಯಿಸಲು ದೂರದ ಬಯಲಿಗೆ ಹೋದರು. ತಾಯಿ ರೊಟ್ಟಿಮಾಡಿ ಅದನ್ನು ಒಂದು ಮಡಿಕೆಯಲ್ಲಿಟ್ಟು "ಇವುಗಳನ್ನು ತೆಗೆದುಕೊಂಡು ಹೋಗಿ ಅಣ್ಣಂದಿರಿಗೆ ಕೊಡು" ಎಂದು ಅದನ್ನು ಇವಾನನ ಕೈಗೆ ಕೊಟ್ಟಳು. ಇವಾನನು ಮಡಿಕೆಯನ್ನು ಹೊತ್ತುಕೊಂಡು ಹೊರಟನು. ಅವನು ಸ್ವಲ್ಪದೂರ ಹೋಗಿ ಹಿಂತಿರುಗಿ ನೋಡಲು ತನ್ನ ನೆರಳು ಕಾಣಿಸಿತು. ತಾನು ನಡೆದರೆ ಅದೂ ನಡೆಯುತಿತ್ತು. ತಾನು ನಿಂತರೆ ಅದೂ ನಿಲ್ಲುತಿತ್ತು. "ಏಯ್, ಯಾರು ನೀನು? ಏಕೆ ನನ್ನನ್ನು ಹಿಂಬಾಲಿಸುತ್ತಿರುವೆ?" ಎಂದು ಇವಾನನು ತನ್ನ ನೆರಳಿನ ಮೇಲೆ ಕೋಪಿಸಿಕೊಂಡನು. ಆದರೆ ನೆರಳು ಉತ್ತರ ಕೊಡಲಿಲ್ಲ!

"ಓಹೋ, ಮಡಿಕೆಯಲ್ಲಿರುವುದು ರೊಟ್ಟಿಗಳೆಂದು ತಿಳಿದುಬಿಟ್ಟಿರಬೇಕು. ಊಂ, ಒಂದು ತೆಗೆದುಕೊಂಡು ಹೋಗು" ಎಂದು ಇವಾನನು ಒಂದು ರೊಟ್ಟಿ ತೆಗೆದು ನೆರಳಿನ ಮೇಲೆ ಎಸೆದು ಮುಂದಕ್ಕೆ ನಡೆದನು.

ಆದರೆ ನೆರಳು ಹಿಂಬಾಲಿಸುತ್ತಲೇ ಇತ್ತು. ಇವಾನ್ ಇನ್ನೊಂದು ರೊಟ್ಟಿ ತೆಗೆದು ನೆರಳಿನ ಮುಖದಮೇಲೆ ಒಗೆದ. ಇನ್ನೂ ನೆರಳು ಹಿಂಬಾಲಿಸುತ್ತಲೇ ಇತ್ತು. ಇವಾನನು ಒಂದೊಂದು ರೊಟ್ಟಿಯನ್ನೂ ತೆಗೆದು ಅದರ ಕಡೆಗೆ ಎಸೆಯುತ್ತಿದ್ದನು. ಕೊನೆಗೆ ಕೋಪವನ್ನು ತಡೆಯಲಾರದೆ ಮಡಿಕೆಯನ್ನೆತ್ತಿ ನೆರಳಮೇಲೆ ಒಡೆದು "ಸಾಯಿ" ಎಂದು ಬಯ್ದು, ಬರಿಗೈಯಲ್ಲಿ ಅಣ್ಣಂದಿರ ಹತ್ತಿರ ಹೋದನು.

ಆರ್. ಕಮಲಾಕ್ಷಿ




"ಅಮ್ಮ ರೊಟ್ಟಿ ಏನೋ ಮಾಡಿಕೊಟ್ಟಳು. ಆದರೆ ಈ ಶನಿ ನನ್ನ ಹಿಂಬಾಲಿಸಲು, ಇವನ ಕಾಟವನ್ನು ತಡೆಯಲಾರದೆ ಒಂದೊಂದೇ ರೊಟ್ಟಿಯನ್ನು ಇವನ ಮುಂದಕ್ಕೆ ಎಸೆದೆ. ಅಷ್ಟೊಂದು ರೊಟ್ಟಿ ತಿಂದರೂ ನನ್ನನ್ನು ಅಸು ಸುಸುತ್ತಲೇ ಇದ್ದಾನೆ. ಬೇಕಾದರೆ ನೋಡಿ" ಎಂದು ತನ್ನ ನೆರಳನ್ನು ತೋರಿಸಿದ ಇವಾನ್.

ಅಣ್ಣಂದಿರು ಕೋಪದಿಂದ ಇವಾನನಿಗೆ ನಾಲ್ಕು ಏಟು ಬಿಗಿದರು. ತಾವು ನೆರೆಯ ಗ್ರಾಮಕ್ಕೆ ಹೋಗಿ ತಿಂಡಿ ತಿಂದು ಬರಬೇಕೆಂದು ನಿರ್ಧರಿಸಿದರು. "ನಾವು ಒಂದಿಷ್ಟು ತಿಂಡಿ ತಿಂದು ಬರುತ್ತೇವೆ. ಅದುವರೆವಿಗೆ ಈ ಕುರಿಗಳನ್ನು ಜೋಪಾನವಾಗಿ ನೋಡಿಕೊಂಡಿರು. ಅವುಗಳ ತಂಟೆಗೆ ಹೋಗಬೇಡ. ಅವು ಚದುರಿಹೋಗದಂತೆ ನೋಡಿಕೊಂಡಿದ್ದರೆ ಸಾಕು" ಎಂದು ಹೇಳಿ ಅಣ್ಣಂದಿರು ಅಲ್ಲಿಂದ ಹೊರಟುಹೋದರು.

ಅವರು ಅತ್ತ ಹೋದನಂತರ ಇವಾನ್ ಕುರಿಗಳನ್ನೆಲ್ಲಾ ಒಂದು ಕಡೆ ಸೇರಿಸಬೇಕೆಂದು ಪ್ರಯತ್ನಮಾಡಿದ. ಆದರೆ ಅವುಗಳಲ್ಲಿ ಕೆಲವು ಮೇಯುತ್ತಾ ಒಂದುಕಡೆಯಿಂದ ಮತ್ತೊಂದು ಕಡೆ ಸಾಗುತ್ತಿದ್ದವು. ಆಗ ಇವಾನ್ ಒಂದು ದೊಣ್ಣೆ ತೆಗೆದುಕೊಂಡು ಬಹಳದೂರ ಹೋಗಿದ್ದ ಕುರಿಗಳ ಕಾಲು ಮುರಿದುಹಾಕಿದ. ಅಣ್ಣಂದಿರು ಹಿಂತಿರುಗಿ ಬಂದು ನೋಡಿದರೆ ಅನೇಕ ಕುರಿಗಳ ಕಾಲುಗಳು ಮುರಿದಿವೆ. ಅವರು ಇವಾನನಿಗೆ ನಾಲ್ಕು ಏಟು ಕೊಟ್ಟು ಮನೆಗೆ ಕಳುಹಿಸಿದರು.

ಅಂದಿನಿಂದ ಇವಾನನ ತಾಯಿ ಅವನಿಗೆ ಯಾವ ಕೆಲಸವನ್ನೂ ಕೊಡುತ್ತಿರಲಿಲ್ಲ. ಹೀಗೇ ಅನೇಕ ದಿನಗಳು ಕಳೆದುಹೋದವು. ಇವಾನ್ ದೊಡ್ಡವನಾದ. ಅವನ ತಂದೆತಾಯಿ ತೀರಿಕೊಂಡರು. ಆದರೆ ಇವಾನನಿಗೆ ಸ್ವಲ್ಪವಾದರೂ ಬುದ್ಧಿ ಬೆಳೆಯಲಿಲ್ಲ.

ಅಮ್ಮನೇ ಇವನನ್ನು ಹಾಳು ಮಾಡಿದಳು. ಒಂದುಕಡೆ ಕೂರಿಸಿ ಎಷ್ಟು ದಿನಾ ತಾನೇ ನಾವು ಕೆಲಸಮಾಡಲು ಸಾಧ್ಯ. ಅವನನ್ನು ಮನೆಯಿಂದ ಹೊರಗೆ ಅಟ್ಟಿದರೆ ಜನ ನಮ್ಮನ್ನು ಆಡಿಕೊಳುತ್ತಾರೆ. ಅವನಿಗೆ ನಾವು ಯಾವುದಾದರೊಂದು ಕೆಲಸವನ್ನು ಕಲಿಸಬೇಕು" ಎಂದು ಯೋಚಿಸಿದರು ಅಣ್ಣಂದಿರು.

ಸಂಕ್ರಾಂತಿ ಹಬ್ಬ ಸಮೀಪಿಸುತ್ತಿತ್ತು. ಮನೆಗೆ ಅಪಾರ ಸರಕು ಸಾಮಾಗ್ರಿಗಳು ಬೇಕು. ಸಾಮಾನಿನ ಪಟ್ಟಿಯೊಂದು ಇವಾನನ ಕೈಗಿತ್ತು, ಅವುಗಳನ್ನು ಗಾಡಿಯಲ್ಲಿ ತರಿಸಬೇಕೆಂದು ಅಣ್ಣಂದಿರು ಯೋಚಿಸಿದರು.

ಇವಾನ್ ಗಾಡಿಗೆ ಕುದುರೆ ಕಟ್ಟಿ, ಉತ್ಸಾಹದಿಂದ ಪಟ್ಟಣಕ್ಕೆ ಹೋದ. ಒಂದು ಮೂಟೆ ಉಪ್ಪು, ದವಸಧಾನ್ಯಗಳು, ಒಂದು ನಾಲ್ಕು ಕಾಲಿನ ಬೆಂಚು, ಹಲವಾರು ಕುಡಿಕೆ ಮಡಿಕೆಗಳು, ಕಪ್ಪು ಸಾಸರುಗಳು, ಒಂದು ಚೀಲದ ತುಂಬಾ ಚಂಚ, ಸವುಟುಗಳನ್ನು ಕೊಂಡು, ಗಾಡಿಯ ಮೇಲೆ ಹೇರಿಕೊಂಡು ಮನೆಗೆ ಹೊರಟ. ನಿಧಾನವಾಗಿ ಹೊಡೆದುಕೊಂಡು ಸ್ವಲ್ಪದೂರ ಹೋಗಲು, ಕುದುರೆ ಆಯಾಸಗೊಂಡು ಇನ್ನೂ ನಿಧಾನವಾಗಿ ನಡೆಯಸಾಗಿತು. "ಓಹೋ, ಭಾರಹೆಚ್ಚಾಗಿರಬೇಕು. ಆದುದರಿಂದಲೇ ಕುದುರೆ ಗಾಡಿಯನ್ನು ಎಳೆಯಲಾರದಾಗಿದೆ. ತುಸ ಭಾರ ಕಡಿಮೆ ಮಾಡಿದರೆ ಸರಿಹೋದೀತು" ಎಂದು ಯೋಚಿಸಿ, ಇವಾನ್ ಗಾಡಿಯಲ್ಲಿದ್ದ ಸಾಮಾನುಗಳಕಡೆ ನೋಡಿದ. ಅವನ ದೃಷ್ಟಿಗೆ ಬೆಂಚು ಬಿತ್ತು. "ಇದಕ್ಕೆ ಕುದುರೆಗಿರುವಂತೆಯೇ ನಾಲ್ಕು ಕಾಲುಗಳಿವೆ. ಇದನ್ನು ಕೆಳಗಿಳಿಸಿದರೆ ಅದು ನಡೆದುಕೊಂಡು ಬರುತ್ತದೆ. ಇದಕ್ಕೂ ಗಾಡಿಸವಾರಿ ಬೇಕೇ? ಹೂಂ" ಎಂದು ಬೆಂಚನ್ನು ಕೆಳಗಿರಿಸಿ "ಬೇಗ ನಡೆದು ಬಾ ಮನೆಗೆ" ಎಂದು ಎಚ್ಚರಿಕೆಯಿತ್ತು ಇವಾನ್ ಗಾಡಿಯನ್ನು ಓಡಿಸಿದ.





ಮತ್ತೆ ಕೊಂಚ ದೂರ ಹೋಗಲು ಕೆಲವು ಕಾಗೆಗಳು 'ಕಾ ಕಾ' ಎಂದು ಕಿರಚುತ್ತಾ ಗಾಡಿಯ ಹಿಂದೆಯೇ ಹಾರಾಡಲು ಪ್ರಾರಂಭಿಸಿದವು. ಗಾಡಿಯಲ್ಲಿದ್ದ ದವಸಧಾನ್ಯಗಳು ಅವುಗಳ ಕಣ್ಣಿಗೆ ಬಿದ್ದವು. "ಅಯ್ಯೋ ಪಾಪ, ಈ ಕಾಗೆಗಳು ಹಸಿದಿರುವಂತಿದೆ" ಎಂದುಕೊಂಡು, ಇವಾನ್ ಕಪ್ಪು, ಸಾಸರುಗಳನ್ನು ಹೊರಕ್ಕೆ ತೆಗೆದು ಅವುಗಳ ತುಂಬಾ ಕಾಳುಗಳನ್ನು ಸುರಿದು "ಹೊಟ್ಟೆ ತುಂಬಾ ತಿನ್ನಿ" ಎಂದು ಕಾಗೆಗಳಿಗೆ ಹೇಳಿ ಗಾಡಿಯನ್ನು ಮುಂದಕ್ಕೆ ಓಡಿಸಿದ. ದಾರಿಯಲ್ಲಿ ಸುಟ್ಟುಹೋಗಿಬೋಳಾಗಿ ನಿಂತಿದ್ದ ಕೆಲವು ಮರಗಳು ಇವಾನನಿಗೆ ಕಾಣಿಸಿದವು. ಅವನ್ನು ನೋಡಿ 'ತ್ಸತ್ಸ, ಈ ತಮ್ಮಂದಿರಿಗೆ ಟೋಪಿಗಳಿಲ್ಲ. ರಾತ್ರಿಹೊತ್ತು ಚಳಿಯಿಂದ ಬಹಳ ಬಾಧೆಪಡುತ್ತಿರಬಹುದು" ಎಂದುಕೊಂಡು ತಾನು ಕೊಂಡುತಂದಿದ್ದ ಮಡಿಕೆಗಳನ್ನು ಎತ್ತಿಕೊಂಡು ಹೋಗಿ ಬೋಳಾಗಿದ್ದ ಮರಗಳ ಮೇಲೆ ಬೋರಲು ಹಾಕಿದ.

ಅಲ್ಲಿಂದ ಮತ್ತೆ ಸ್ವಲ್ಪದೂರ ಹೋಗಲು ಒಂದು ಝರಿ ಕಾಣಿಸಿತು. ಇವಾನ್ ಅದರಲ್ಲಿ ತನ್ನ ಬಾಯಾರಿಕೆಯನ್ನು ತೀರಿಸಿಕೊಂಡು, ಕುದುರೆಗೂ ನೀರು ಕುಡಿಸಲು ಪ್ರಯತ್ನಿಸಿದ. ಎಷ್ಟು ಬಲವಂತಮಾಡಿದರೂ ಅದು ನೀರನ್ನು ಕುಡಿಯುವುದಿರಲಿ, ಮುಟ್ಟಲಿಲ್ಲ.

'ನೀರು ಸಪ್ಪಗಿರುವುದೆಂದು ಕುದುರೆ ಕುಡಿಯುತ್ತಿಲ್ಲ' ಎಂದುಕೊಂಡು ಇವಾನ್ ಗಾಡಿಯಲ್ಲಿದ್ದ ಮೂಟೆ ಉಪ್ಪನ್ನು ಝರಿಯಲ್ಲಿ ಸುರಿದು, "ಈಗ ಕುಡಿ" ಎಂದು ಕುದುರೆಯನ್ನು ಒತ್ತಾಯಪಡಿಸಿದ. ಆಗಲೂ ಕುದುರೆ ನೀರನ್ನು ಮುಟ್ಟದಿರಲು ಇವಾನ್ ಮುನಿಸುಗೊಂಡ.

'ನಿನಗಾಗಿ ಉಪ್ಪನ್ನೆಲ್ಲಾ ನೀರಿನಲ್ಲಿ ಸುರಿದರೂ ಕುಡಿಯುವುದಿಲ್ಲವೇ. ನಿನಗಷ್ಟು ದಿಮಾಕೆ?' ಎಂದು ಇವಾನ್ ಒಂದು ಕೋಲು ತೆಗೆದುಕೊಂಡು ಕುದುರೆಯ ತಲೆಯಮೇಲೆ ಎರಡು ಪೆಟ್ಟು ಕೊಡಲು ಅದು ಸತ್ತುಹೋಯಿತು.

ಮನೆಗೆ ತೆಗೆದಕೊಂಡು ಹೋಗಬೇಕಾದ ಸಾಮಾನುಗಳು ಇನ್ನು ಬಹಳ ಉಳಿದಿರಲಿಲ್ಲ. ಚಂಚ ಸವುಟುಗಳಿದ್ದ ಚೀಲವನ್ನು ಭುಜದ

ಮೇಲೆ ಹಾಕಿಕೊಂಡು ಮನೆ ಮಾರ್ಗಹಿಡಿದ. ಅವನು ಒಂದೊಂದು ಹೆಜ್ಜೆಯಿಡುತ್ತಿದ್ದರೆ ಚೀಲದಲ್ಲಿದ್ದ ಸಾಮಾನುಗಳು ಶಬ್ದ ಮಾಡುತ್ತಿದ್ದವು. ಆ ಶಬ್ದವು ಇವಾನನ ಕಿವಿಗಳಿಗೆ, "ಹುಚ್ಚ ಇವಾನ್, ಹುಂಬ ಇವಾನ್" ಎಂದೆನ್ನುತ್ತಿರುವಂತೆ ಕೇಳಿಸಿತು.

ಇವಾನನ ಕೋಪ ಮಿತಿಮೀರಿತು. ಕೋಪದಿಂದ ಚೀಲವನ್ನು ಕೆಳಗೆಸೆದು, ಸೇಡಿನಿಂದ ಅದನ್ನು ತುಳಿದು, "ಸಾಯಿರಿ, ಸಾಯಿರಿ" ಎಂದು ಶಾಪವಿತ್ತು, ಬರಿಗೈಯನ್ನು ಬೀಸಿಕೊಂಡೇ ಮನೆಗೆ ಸೇರಿಕೊಂಡ.

ಇವನ ಕತೆ ಕೇಳಿ ಅಣ್ಣಂದಿರು ಕಿಡಿಕಿಡಿಯಾಗಿ "ಹೋಗೋ ಮೂಢಾ ಹೋಗು. ಮರಗಳಮೇಲೆ ಇಟ್ಟಿರುವ ಮಡಿಕೆಗಳನ್ನೂ, ಕಪ್ಪು ಸಾಸರುಗಳನ್ನಾದರೂ ತೆಗೆದುಕೊಂಡು ಬಾ, ಇಲ್ಲ, ನಿನ್ನನ್ನು ಕೊಂದುಹಾಕುತ್ತೇವೆ" ಎಂದು ಗದರಿಸಿ ಕಳುಹಿಸಿದರು.

ಇವಾನ್ ಬಂದ ದಾರಿಯಲ್ಲೇ ಓಡಿದ. ಮಡಿಕೆ ಮತ್ತು ಕಪ್ಪುಸಾಸರುಗಳನ್ನು ಎತ್ತಿಕೊಂಡು ಅವುಗಳಿಗೆ ತೂತುಮಾಡಿ ಒಂದು ಹಗ್ಗವನ್ನು ಆ ತೂತಿನೊಳಗೆ ತೂರಿಸಿ, ಬೆನ್ನ ಮೇಲೆ ಹಾಕಿಕೊಂಡು ಮನೆಗೆ ಬಂದ, ಭೂಪ!

ಅಣ್ಣಂದಿರಿಬ್ಬರೂ ಆಗ್ರಹ ಪೂರಿತರಾಗಿ ಇವಾನನನ್ನು ಬಡಿದುಹಾಕಿದರು. ಹಬ್ಬಕ್ಕೆ ಬೇಕಾದ ಸಾಮಾನುಗಳನ್ನು ಕೊಂಡುತರಲು ಅವರೇ ಹೊರಟರು. ಇವಾನ್ ಭೀತಿಗೊಂಡು ಮನೆಯಲ್ಲೇ ಉಳಿದ. ಸ್ವಲ್ಪ ಹೊತ್ತಿಗೆಲ್ಲಾ ಯಾರೋ ತನ್ನನ್ನು ನೋಡಿ ನಗುತ್ತಿರುವಂತೆ ತೋರಿತು. ನಗುವ ಶಬ್ದವೂ ಕೇಳಿತು. ಅಡಿಗೆ ಮನೆಗೆಹೋಗಿ ನೋಡಲು ಮಡಿಕೆಯಲ್ಲಿದ್ದ ಅನ್ನ ಕುತಕುತನೆ ಕುದಿಯುತಿತ್ತು.

"ಸುಮ್ಮನಿರ್ರೋ, ನೀವೂ ಸಹ ನನ್ನ ಗೋಳು ಹೊಯ್ಯಕೋಬೇಡಿ" ಎಂದ ತಿಳಿಗೇಡಿ ಇವಾನ್. ಶಬ್ದ ಕಡಿಮೆಯಾಗಲಿಲ್ಲ. ಇನ್ನಷ್ಟು ಹೆಚ್ಚಾಯಿತು. ಇವಾನನಿಗೆ ರೋಷ ಬಂತು. ಒಂದು ಕಟ್ಟಿಗೆ ತಂದು ಮಡಿಕೆಯ ಮೇಲೆ ಹಾಕಿದ. ಆಗಲೇ ಅಣ್ಣಂದಿರು ಸಾಮಾನುಗಳೊಂದಿಗೆ ಬಂದರು. ಇವಾನನು ನಿಜವಾಗಿ ಹುಂಬನೆಂತಲೂ, ಅವನನ್ನು ತಿದ್ದುವುದು ಅಸಾಧ್ಯವೆಂತಲೂ ಗ್ರಹಿಸಿದರು.





# ಆಷಾಢಭೂತಿ

ಹಿಂದೆ ಕೃಷ್ಣದೇವರಾಯರು ದಕ್ಷಿಣ ಹಿಂದೂ ಸ್ಥಾನವನ್ನು ಅತಿ ವೈಭವದಿಂದ ಆಳಿದರು. ಅವರ ಆಸ್ಥಾನದಲ್ಲಿ ಗಣ್ಯಕವಿಗಳೂ, ಪಂಡಿತ ಶಿಖಾಮಣಿಗಳೂ ಇರುತ್ತಿದ್ದರು. ನಿತ್ಯವೂ ಗಹನವಾದ ವಿಷಯ ಕುರಿತು ಸ್ವಾರಸ್ಯವಾಗಿ ಚರ್ಚೆ ನಡೆಯುತಿತ್ತು.

ಒಂದು ದಿನ ಪಂಡಿತರ ನಡುವೆ ಒಂದು ಸಂದೇಹ ತಲೆದೋರಿತು: ಧರ್ಮರಾಯನ ತಮ್ಮಂದಿರು ತಮ್ಮ ಅಣ್ಣನಲ್ಲಿ ಬಹಳ ಭಕ್ತಿ ಶ್ರದ್ಧೆಗಳನ್ನಿಟ್ಟುಕೊಂಡಿದ್ದರು. ಆತನೊಂದಿಗೆ ರಾಜ್ಯಭ್ರಷ್ಟರಾದರು. ಅರಣ್ಯವಾಸ, ಅಜ್ಞಾತ ವಾಸವನ್ನೂ ಮಾಡಿದರು. ಶ್ರೀರಾಮನ ತಮ್ಮಂದಿರೂ ಸಹ ತಮ್ಮ ಅಣ್ಣನಲ್ಲಿ ಭಕ್ತಿ ಭಾವವನ್ನಿಟ್ಟುಕೊಂಡಿದ್ದರು. ಲಕ್ಷ್ಮಣನು ಅಣ್ಣನೊಂದಿಗೆ ಹದಿನಾಲ್ಕುವರ್ಷ ವನವಾಸ ಮಾಡಿ ರಾತ್ರಿಹಗಲು ಕಣ್ಣುಮುಚ್ಚದೆ ಎಚ್ಚತ್ತು ಕೊಂಡೇ ಇದ್ದನು. ಭರತನು ಕೋಸಲದೇಶಕ್ಕೆ ರಾಜನಾದರೂ ಸಿಂಹಾಸನದ ಮೇಲೆ ತನ್ನ ಅಣ್ಣನ ಪಾದುಕೆಗಳನ್ನು ಇಟ್ಟಿದ್ದನೇ ಹೊರತು, ತಾನು ಸಿಂಹಾಸನವನ್ನೇರಲಿಲ್ಲ. ರಾಮ ಮತ್ತು ಧರ್ಮರಾಯನ ತಮ್ಮಂದಿರಲ್ಲಿ ಯಾರ ಶ್ರದ್ಧಾಭಕ್ತಿಗಳು ದೊಡ್ಡವು ಎಂಬ ಸಮಸ್ಯೆ ಉದ್ಭವಿಸಿತು.

ಸಭೆಯಲ್ಲಿ ಕೆಲವರು ಧರ್ಮರಾಯನ ತಮ್ಮಂದಿರ ಪಕ್ಷವನ್ನೂ, ಕೆಲವರು ರಾಮನ ತಮ್ಮಂದಿರ ಪಕ್ಷವನ್ನೂ ವಹಿಸಿ ಮಾತನಾಡಿದರು. ಹೀಗೆ ಅವರ ವಾದವಿವಾದಗಳು ಎಷ್ಟು ಹೊತ್ತಾದರೂ ಬಗೆಹರಿಯಲೇ ಇಲ್ಲ. ಕೊನೆಗೆ ಅವರು ಕೃಷ್ಣದೇವರಾಯರನ್ನು ತಮ್ಮ ಸಮಸ್ಯೆಯನ್ನು ಬಿಡಿಸುವಂತೆ ಕೋರಿದರು. ಆಗ ರಾಯರು,

"ಶ್ರೀರಾಮನ ತಮ್ಮಂದಿರು ಶ್ರೀರಾಮನಿಗಿಂತಲೂ ಯಾವರೀತಿಯಲ್ಲೂ ಮಿಗಿಲಾದವರಲ್ಲ. ಪ್ರತಿಯೊಂದಕ್ಕೂ ಅಣ್ಣನಮೇಲೆ ಆಧಾರಪಟ್ಟಿದ್ದರು. ಧರ್ಮರಾಯನ ತಮ್ಮಂದಿರು ಅನೇಕಾನೇಕ ವಿಷಯಗಳಲ್ಲಿ ಅಣ್ಣನನ್ನೂ ಮೀರಿಸಿದ್ದರು. ಆದರೂ ಸಹ ಆತನಿಗಾಗಿ ಸಮಸ್ತ ತ್ಯಾಗಗಳನ್ನೂ ಮಾಡಿ, ನಾನಾ ಕಷ್ಟ

ಎಂ. ಹರಿಹರಪ್ಪ

ಗಳನ್ನು ಅನುಭವಿಸಿದರು. ಆದುದರಿಂದ ಧರ್ಮರಾಯನ ತಮ್ಮಂದಿರ ಭಕ್ತಿಶ್ರದ್ಧೆಗಳು ಹಿರಿಯವು" ಎಂದು ನುಡಿದರು.

ಇದೆಲ್ಲವನ್ನೂ ಕೇಳುತ್ತಾ, ರಾಯರಿಗೆ ಚಾಮರವನ್ನು ಬೀಸುತ್ತಿದ್ದ ಅಗಸ ತಟಕ್ಕನೆ "ಈ ಅವತಾರದಲ್ಲೂ ಸಹ ದೇವರಿಗೆ ಪಾಂಡವರಲ್ಲೇ ಪಕ್ಷಪಾತ" ಎಂದ. ಶ್ರೀ ಕೃಷ್ಣದೇವರಾಯರು ಭಾರತದ ಕೃಷ್ಣನ ಅಪರಾವತಾರವೆಂದು ಅವನು ಸೂಚಿಸಿದ.

ರಾಯರು ಅಗಸನ ಚಮತ್ಕಾರಕ್ಕೆ ತಲೆ ದೂಗಿ, ತಮ್ಮ ಮಂತ್ರಿಯಾದ ತಿಮ್ಮರಸ ನೊಂದಿಗೆ "ನಮ್ಮ ಅಗಸನಿಗೆ ಏನು ಬೇಕೋ ಕೇಳಿ ಅದನ್ನು ಕೊಡಿ" ಎಂದರು. ಕೂಡಲೇ ಅಗಸನು "ನನಗೆ ಮತ್ತೇನೂ ಬೇಡ–ದೇವರ ಕೋಟೆ ಕೊಡಿಸಿಕೊಡಿ" ಎಂದ.

ತಿಮ್ಮರಸನು ಚಕಿತನಾದನು. ಅಗಸನನ್ನು ಏಕಾಂತವಾಗಿ ಕರೆದು "ಲೋ, ಇನ್ನೇನಾದರೂ ಕೋರಿಕೋ. ಕೂಡಲೇ ಕೊಡುವೆನು" ಎಂದ. ಅಗಸನು ವಿನಯವಾಗಿ "ನನಗೆ ಇನ್ನಾವಕೋರಿಕೆಯೂ ಇಲ್ಲಸ್ವಾಮಿ" ಎಂದ. ಅಗಸನಿಗೆ ಕೋಟೆ ಕೊಡುವುದೆಂತು? ಹೀಗೆ ಯೋಚನೆಯಲ್ಲಿಯೇ ಕೆಲದಿನಗಳು ಕಳೆದವು. ಒಂದು ದಿನ ಕೆಲವುಜನ ಕೃಷ್ಣಾತೀರ ನಿವಾಸಿಗಳು ಅರಮನೆಗೆ ಯಾವುದೋ ಕಾರ್ಯಾರ್ಥವಾಗಿ ಬಂದರು. ತಿಮ್ಮರಸನಿಗೆ ಅವರಲ್ಲೊಬ್ಬನು 'ದೇವರಕೋಟೆ' ಎಂಬ ಗ್ರಾಮದಿಂದ ಬಂದನೆಂದು ತಿಳಿಯಿತು. ಅದು ಕೃಷ್ಣಾನದಿಗೆ ಉತ್ತರ ಭಾಗದಲ್ಲಿರುವ ಒಂದು ಕುಗ್ರಾಮವೆಂದೂ ತಿಳಿಯಿತು.

ಕೂಡಲೇ ತಿಮ್ಮರಸನು ಅಗಸನನ್ನು ಕರೆಯಿಸಿ "ಲೋ, ನಿನಗೆ ದೇವರಕೋಟೆಯನ್ನು ಬಹುಮಾನವಾಗಿ ಕೊಟ್ಟದ್ದೇನೆ. ಇಂದೇ ಇಲ್ಲಿಂದ ಹೊರಡು. ಅದು ಕೃಷ್ಣಾನದಿಯ ಉತ್ತರಭಾಗದಲ್ಲಿದೆ. ಇದೋ ಫರ್ಮಾನಾ. ತೆಗೆದುಕೊಂಡು ಹೋಗು" ಎಂದರು.

ಅಗಸನ ಮುಖ ಪೆಚ್ಚಾಯಿತು. ರಾಯರ ಕೋಟೆ ತನಗೆ ಕೊಡುವರೆಂದು ಅವನು ಆಶೆಯಿಂದಿದ್ದ. ಆ ಆಶೆ ನಿರಾಶೆಯಾದುದೇ ಅಲ್ಲದೆ ಆಸ್ಥಾನದಲ್ಲಿರುವ ಯೋಗ್ಯತೆಯನ್ನೂ ಸಹ ಅವನು ಕಳೆದುಕೊಂಡನು.





# ಮೂರು ವಜ್ರಗಳು

ಬಹಳಕಾಲದ ಹಿಂದೆ ವಿದರ್ಭ ದೇಶದದಲ್ಲಿ ಕಳ್ಳತನ, ದರೋಡೆಗಳು ವಿಪರೀತವಾಗಿದ್ದವು. ಆ ದೇಶದ ರಾಜನು ಇನ್ನೂ ಯುವಕ, ಉತ್ಸಾಹವಂತ. ಬೇಕಷ್ಟುಮಂದಿ ರಾಜಭಟರು, ರಕ್ಷಕಭಟರು, ತಳವಾರರು, ದಂಡನಾಯಕರು ಹೀಗೆ ಎಷ್ಟೋಜನ ಸಿಬ್ಬಂದಿ ಇದ್ದರೂಸಹ ಚೋರರನ್ನು ಹಿಡಿಯಲು ಅಶಕ್ತರಾಗಿರುವುದು ಆತನಿಗೆ ಸೋಜಿಗವೆನಿಸಿತು.

ದಿನಹೋದಂತೆ ಕಳ್ಳತನಗಳು ಕಡಿಮೆಯಾಗುವ ಬದಲು ಹೆಚ್ಚಾಗುತ್ತಿದ್ದವು. ಇದರ ರಹಸ್ಯವನ್ನು ಭೇದಿಸಬೇಕೆಂದು ರಾಜನು ಯಾರೋ ಪ್ರಯಾಣಿಕನಂತೆ ವೇಷ ಧರಿಸಿ, ಒಂದು ಅರ್ಧರಾತ್ರಿಯಲ್ಲಿ ರಾಜಧಾನಿಯಿಂದ ಹೊರಟು ಬೆಳಗಾಗುವ ವೇಳೆಗೆ ಒಂದು ಗಾವುದ ದೂರದಲ್ಲಿದ್ದ ಸಣ್ಣ ಹಳ್ಳಿಯೊಂದನ್ನು ಸೇರಿಕೊಂಡನು.

ಅಲ್ಲೊಂದು ಭಾರಿ ಅರಳಿ ಮರವಿತ್ತು. ಆ ಮರದ ಕೆಳಗೆ ಆ ಊರಿನ ಹಿರಿಯರು ಕೆಲವರು ಕುಳಿತುಕೊಂಡು ಮಾತುಕತೆಯಾಡುತ್ತಿದ್ದರು. ಪ್ರಯಾಣಿಕನ ವೇಷ ಧರಿಸಿದ್ದ ರಾಜನೂ ಸಹ ಕಟ್ಟೆಯಮೇಲೆ ಕುಳಿತು, "ನಿಮ್ಮ ದೇಶದಲ್ಲಿ ಕಳ್ಳತನ, ದರೋಡೆಗಳು ವಿಪರೀತವೆಂದು ಕೇಳಿದ್ದೇನೆ. ಪಾಪ. ನೀವೆಲ್ಲಾ ಹೇಗೆ ಜೀವಿಸುತ್ತಿರುವಿರೋ ನಾಕಾಣೆ" ಎಂದು ಪ್ರಸ್ತಾವಿಸಿದನು.

"ಹಣವಂತರಿಗೆ ಕಳ್ಳರಭಯವೇ ಕೊರತು ನಮಗೇತರ ಭಯ ತಮ್ಮಾ. ಅರಮನೆಯವರು ನಮ್ಮನ್ನು ಎಂದೋ ಸುಲಿಗೆ ಮಾಡಿದರು."

"ದಿನಾ ಕಳ್ಳತನಗಳು ನಡೆದರೂ ಕಳ್ಳರು ಸಿಕ್ಕಿಬೀಳುವುದಿಲ್ಲವಂತೆ. ಬಹಳ ವಿಸ್ಮಯಕರವಾಗಿದೆ. ನಿಮ್ಮ ಹಳ್ಳಿಯ ಕಳ್ಳರು ತುಂಬಾ ಹುಷಾರಿರಬೇಕು" ಎಂದ ರಾಜ.

"ಭಾರಿ ಕಳ್ಳರನ್ನು ಅರಮನೆ ಕಾಪಾಡುತ್ತದೆ. ಸಣ್ಣ ಪುಟ್ಟ ಕಳ್ಳರನ್ನು ಪ್ರಜೆಗಳು ಕಾಪಾಡುತ್ತಾರೆ. ಕಳ್ಳರು ಸಿಗದಿರಲು ಇದಕ್ಕಿಂತಲೂ ಬೇರೆ ಕಾರಣ ಬೇಕೇ?" ಎಂದನೊಬ್ಬ ಮುದುಕ. "ಸಣ್ಣಪುಟ್ಟ ಕಳ್ಳರೆಂದರೆ ಪ್ರಜೆಗಳಿಗೇಕೆ ಅಷ್ಟು ಅಭಿಮಾನ?" ಎಂದು

ವಿ. ಸುಬ್ಬರಾಮಾಶಾಸ್ತ್ರಿ

ರಾಜನು ಸೋಜಿಗದಿಂದ ಪ್ರಶ್ನಿಸಿದ. "ಅವರು ಭಾರಿ ಕಳ್ಳರಂತೆ ನೀತಿಬಾಹಿರರಲ್ಲ; ಋಜು ಮಾರ್ಗದವರು, ಸರಳ ಜೀವಿಗಳು" ಎಂದು ವೃದ್ಧನು ಗಂಭೀರವಾಗಿ ನುಡಿದ.

ರಾಜನು ಅಲ್ಲಿಂದ ಮತ್ತೊಂದು ಗ್ರಾಮುಕ್ಕೆ ತೆರಳಿದನು. ಆ ಗ್ರಾಮದಲ್ಲಿ ಯಾವ ಕೆಲಸ ವನ್ನೂ ಮಾಡದೆ ನಿಶ್ಚಿಂತೆಯಿಂದ ಕಾಲ ಕಳೆ ಯುವವರು ಯಾರಾದರೂ ಇರುವರೊ ಎಂದು ವಿಚಾರಿಸಿದ. ಯಾರೋ ಒಬ್ಬಾತ ನಿರುವಂತೆ ತಿಳಿಯಿತು. ರಾಜನು ಆತನ ಬಳಿಗೆ ಹೋಗಿ "ಅಯ್ಯಾ ನಾನು ಪರದೇಶಿ. ಈ ಗ್ರಾಮದಲ್ಲಿ ನ್ಯಾಯವಾಗಿ ಕಳ್ಳತನ ಮಾಡಿ ಕೊಂಡು ಜೀವಿಸಲು ಬಂದೆ. ನನಗೆ ಆ ವಿದ್ಯೆ ತಿಳಿಯದು. ನೀವು ಸಹಾಯ ಮಾಡುವಿರಾ?" ಎಂದು ವಿನಯದಿಂದ ಕೇಳಿದ.

"ನಾನು ಕಳ್ಳನೆಂದು ಹೇಗೆ ಕಂಡು ಹಿಡಿದೆ?" ಆತನು ಆಶ್ಚರ್ಯದಿಂದ ಕೇಳಿದ.

"ನಾನೂ ಸಹ ಕಳ್ಳನೇ ಆದುದರಿಂದ ಸಹೋದ್ಯೋಗಿಯನ್ನು ಗುರುತಿಸಬಲ್ಲೆ" ಎಂದ ರಾಜ. "ಬೇಷ್. ನೀನು ನೀತಿನಿಯಮ ಗಳನ್ನು ಪಾಲಿಸಿದೆಯಾದರೆ ಬಹಳ ಮುಂದಕ್ಕೆ ಬರುವೆ" ಎಂದ ಕಳ್ಳ.

"ನಿಮ್ಮೊಂದಿಗೆ ನನ್ನನ್ನೂ ಒಂದುಸಾರಿ ಕಳವು ಮಾಡಲು ಕರೆದೊಯ್ಯಿರಿ. ತರು ವಾಯ ನನ್ನ ಗೊಡವೆ ನಾನು ನೋಡಿ ಕೊಳ್ಳುವೆನು" ಎಂದ ರಾಜ. "ಹಾಗಾದರೆ ಇಂದು ರಾತ್ರಿ ಅರಮನೆ ಖಜಾನೆಗೆ ಕನ್ನಹಾ



ಕೋಣ. ಸರಿಯೋ?" ಎಂದು ಕಳ್ಳ ಕೇಳಿದ. "ಅದು ಅಪಾಯಕರವಲ್ಲವೆ? ಯಾವು ದಾದರೊಂದು ಸಣ್ಣ ಮನೆಗೆ ಕನ್ನಹಾಕು ವುದು ಸುರಕ್ಷಿತವಾಗಿ ತೋರುವುದು."

"ಛೆ, ಛೆ. ನೀನೆಲ್ಲೋ ಗಜಕಳ್ಳನಿರಬೇಕು. ನಾವು ಸಣ್ಣ ಕಳ್ಳರು. ಆದರಿಂದ ಸಿರಿವಂತ ರನ್ನೇ ದೋಚುವೆವು" ಎಂದ ಕಳ್ಳ.

ಕತ್ತಲಾದಕೂಡಲೇ ಇಬ್ಬರೂ ಹೊರಟು ಅರ್ಧರಾತ್ರಿವೇಳೆಗೆ ಅರಮನೆಯನ್ನು ಸೇರಿದರು. "ಅಯ್ಯಾ, ಈ ಹಂಚಿಕೆಯಲ್ಲಿ ನನ್ನ ಪಾಲು ಎಷ್ಟು?" ಎಂದು ಕೇಳಿದ ರಾಜ. "ಇಬ್ಬರಿಗೂ ಸಮಭಾಗ" ಎಂದ ಕಳ್ಳ. "ನನಗಿಂತಲೂ ಅನುಭವಸ್ಥರು ನೀವು. ನಿಮಗೆ ಹೆಚ್ಚಾಗಿ ಸಲ್ಲುವುದು ನ್ಯಾಯ.

ನನಗೆ ಕಡಿಮೆ ಭಾಗ ಸಾಕು'' ಎಂದ ರಾಜ.

"ಹಾಗಲ್ಲ. ನಾವು ಸಿಕ್ಕಿಬಿದ್ದರೆ ಇಬ್ಬರಿಗೂ ಒಂದೇ ರೀತಿ ಶಿಕ್ಷೆ ವಿಧಿಸುವರು. ಆದುದರಿಂದ ಕಳವು ಮಾಡಿದ ಮಾಲನ್ನು ಸಮಭಾಗವಾಗಿ ಹಂಚಿಕೊಳ್ಳುವುದೇ ನ್ಯಾಯ"

ಕಳ್ಳನ ನ್ಯಾಯಬುದ್ಧಿಗೆ ತಲೆದೂಗಿ "ನಿಮ್ಮ ಮಾತು ನಂಬುವುದಾದರೂ ಹೇಗೆ?'' ಎಂದು ಕೇಳಿದ ರಾಜ.

"ನಾನು ಸುಳ್ಳನ್ನು ಗುರುದಕ್ಷಿಣೆಯಾಗಿ ಕೊಟ್ಟುಬಿಟ್ಟೆ!'' ಎಂದ ಕಳ್ಳ.

ಯಾರಕಣ್ಣಿಗೂ ಬೀಳದಂತೆ ಕಳ್ಳ ರಾಜನನ್ನು ಖಜಾನೆಗೆ ಕರೆದುಕೊಂಡು ಹೋದ. ಅಲ್ಲಿ ಒಂದು ಚಿನ್ನದ ಪೆಟ್ಟಿಗೆಯಲ್ಲಿ ಮೂರು ಭಾರಿ ವಜ್ರಗಳಿದ್ದವು.

"ಮೂರು ವಜ್ರಗಳನ್ನು ಸಮಭಾಗವಾಗಿ ಹಂಚಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ತಲಾ ಒಂದೊಂದು ತೆಗೆದುಕೊಂಡು ಮೂರನೆಯದನ್ನು ಹಾಗೇ ಬಿಟ್ಟುಬಿಡೋಣ. ಈ ಒಂದು ವಜ್ರವನ್ನು ನಿಮ್ಮೂರಲ್ಲಿ ಮಾರಿದೆಯಾದರೆ, ನೀನು ಜೀವಿಸಿರುವಷ್ಟುದಿನ ಸುಖವಾಗಿ ಕಾಲಕಳೆಯಬಹುದು'' ಎಂದ ಕಳ್ಳ. ಮತ್ತೆ ಯಾವ ವಸ್ತುವನ್ನೂ ಮುಟ್ಟದೆ ಅವರು ಹೊರಗೆ ಬಂದುಬಿಟ್ಟರು.

ರಾಜನು ಕಳ್ಳನ ಹತ್ತಿರದಿಂದ ಅಪ್ಪಣೆ ಪಡೆದು ತನ್ನ ಅರಮನೆಗೆ ಒಂದುಬಿಟ್ಟನು.

ಬೆಳಗಿನ ಜಾವವೇ ಪಹರೆಯವರು ಧನಾಗಾರಕ್ಕೆ ಯಾರೋ ಕನ್ನಹಾಕಿರುವುದನ್ನು ಕಂಡು ಮಂತ್ರಿಗೆ ತಿಳಿಸಿದರು. ಮಂತ್ರಿ ಧನಾ



ಗಾರಕ್ಕೆ ಹೋಗಿ ಎರಡು ವಜ್ರಗಳು ಮಾತ್ರ ಕಳೆದುಹೋಗಿರುವುದನ್ನು ಗಮನಿಸಿ, ಮೂರನೆಯದನ್ನು ತನ್ನ ಕಿಸೆಗೆ ಸೇರಿಸಿ, ರಾಜನೊಂದಿಗೆ ಮೂರು ವಜ್ರಗಳನ್ನು ಕಳ್ಳರು ಅಪಹರಿಸಿದರೆಂದು ವರದಿ ಮಾಡಿದನು.

ಇಂತಹ ಗ್ರಾಮದಲ್ಲಿ, ಇಂತಹ ಮನುಷ್ಯನನ್ನು ಕರೆಯಿಸಿದರೆ ಕಳ್ಳತನ ಬಯಲಾಗುವುದೆಂದು ರಾಜನು ಮಂತ್ರಿಯೊಂದಿಗೆ ಹೇಳಿದ. ರಾಜಭಟರು ಹೋಗಿ ಆ ವ್ಯಕ್ತಿಯನ್ನು ಕರೆತಂದು ರಾಜನ ಮುಂದೆ ನಿಲ್ಲಿಸಿದರು.

"ಅಯ್ಯಾ, ನಾನೂ ಮತ್ತೊಬ್ಬ ಕಳ್ಳನೂ ಹಿಂದಿನ ರಾತ್ರಿ ಮಹಾರಾಜರ ಖಜಾನೆಯಿಂದ ಎರಡು ವಜ್ರಗಳನ್ನು ಅಪಹರಿಸಿ, ತಲಾ ಒಂದೊಂದು ವಜ್ರವನ್ನು ತೆಗೆದುಕೊಂಡೆವು. ಮೂರನೆಯದನ್ನು ನಾವು ಮುಟ್ಟಲೇ ಇಲ್ಲ. ಇದೋ ನನ್ನ ಪಾಲಿಗೆ ಬಂದ ವಜ್ರ" ಎಂದು ಕಳ್ಳನು ತನ್ನ ಜೋಬಿನಿಂದ ಒಂದು ವಜ್ರವನ್ನು ತೆಗೆದು ಅರಸನ ಮುಂದಿಟ್ಟ.

"ಇವನೇ ಮಿಕ್ಕೆರಡು ವಜ್ರಗಳನ್ನು ಎಲ್ಲೋ ಬಚ್ಚಿಟ್ಟಿರಬೇಕು. ಇವನನ್ನು ಗಲ್ಲಿಗೇರಿಸಿ ಬಿಡಬೇಕು ಮಹಾಪ್ರಭೂ" ಎಂದ ಮಂತ್ರಿ.

"ಅವಸರ ಪಡಬೇಡಿ. ಇವನೊಂದಿಗೆ ಕಳ್ಳತನ ಮಾಡಿದ ಚೋರನನ್ನು ನಾನು ಹಿಡಿದೆ. ಅವನೂ ಸಹ ಇದೇ ರೀತಿ ಹೇಳಿ ತನ್ನ ಪಾಲಿಗೆ ಬಂದ ವಜ್ರವನ್ನು ನನಗೆ ಕೊಟ್ಟ. ಇದೋ ಆ ವಜ್ರ" ಎಂದು ರಾಜನು ತನ್ನ ಕಿಸೆಯಿಂದ ಎರಡನೆ ವಜ್ರವನ್ನೂ ತೆಗೆದು ಎಲ್ಲರಿಗೂ ತೋರಿಸಿದ.

"ಹಾಗಾದರೆ ಮೂರನೇ ವಜ್ರವನ್ನು ಅಪಹರಿಸಿದವನನ್ನು ಹಿಡಿಯಬೇಕು. ನನಗೊಂದು ತಿಂಗಳ ಅವಕಾಶ ಕೊಡಿ" ಎಂದ ಮಂತ್ರಿ.

"ಈ ಭಾಗ್ಯಕ್ಕೆ ಒಂದು ತಿಂಗಳೇಕೆ? ಮೂರನೇ ವಜ್ರ ನಿಮ್ಮ ಕಿಸೆಯಲ್ಲೇ ಇರಬೇಕು ನೋಡಿ" ಎಂದ ರಾಜ.

ಮಂತ್ರಿ ಮರು ಮಾತನಾಡದೆ ನಡುಗುತ್ತಿದ್ದ ಕೈಯಿಂದ ತನ್ನ ಕಿಸೆಯಲ್ಲಿದ್ದ ಮೂರನೇ ವಜ್ರವನ್ನು ತೆಗೆದು ಅರಸನ ಮುಂದಿಟ್ಟ.

ರಾಜನು ಮಂತ್ರಿಯನ್ನು ಗಲ್ಲಿಗೇರಿಸುವಂತೆ ಆಜ್ಞೆಮಾಡಿ, ಮಂತ್ರಿಯ ಸ್ಥಾನದಲ್ಲಿ ಆ ಕಳ್ಳನನ್ನು ನೇಮಿಸದನು.





# ಸುಳ್ಳಿನ ಸ್ಪರ್ಧೆ

ಹಿಂದೆ ಕಾಶೀರಾಜ್ಯವನ್ನು ಯಶೋವರ್ಧನನೆಂಬ ರಾಜನು ಆಳುತ್ತಿದ್ದನು. ಆಗ ವ್ಯಾಪಾರ ತುಂಬಾ ಉನ್ನತಸ್ಥಿತಿಯಲ್ಲಿತ್ತು. ಸುತ್ತಮುತ್ತಲಿನ ರಾಜ್ಯಗಳಲ್ಲಿ ಮತಗಳ ಆಧಾರದ ಮೇಲೆ ಆಡಳಿತ ಏರ್ಪಡುತ್ತಿದ್ದವು. ಅನಿರೀಕ್ಷಿತವಾಗಿ ಯುದ್ಧ ಪ್ರಾಪ್ತವಾದರೆ ಇತರ ರಾಜ್ಯಗಳ ನೆರವು ಬೇಕು. ವಾಣಿಜ್ಯದಿಂದ ಕಾಶೀರಾಜ್ಯದ ವರ್ತಕರು ಅಭಿವೃದ್ಧಿ ಹೊಂದಬೇಕಾದರೆ ಇತರ ದೇಶಗಳೊಂದಿಗೆ ಅನುಕೂಲವಾದ ಒಪ್ಪಂದಗಳನ್ನು ಮಾಡಿಕೊಳ್ಳಬೇಕು. ಇವುಗಳನ್ನೆಲ್ಲಾ ಸಾಧಿಸಲು, ಚತುರರಾದ ರಾಜಕಾರಣಪಟುಗಳ ರಾಯಭಾರಿ ತಂಡವನ್ನು ಸಿದ್ಧಪಡಿಸಿಕೊಳ್ಳಬೇಕು. ಸಮಯೋಚಿತವಾಗಿ ಸುಳ್ಳಾಡಿ, ಹೊರಗಿನವರನ್ನೂ ಇಕ್ಕಟ್ಟಿಗೆ ಸಿಲುಕಿಸುವವನೇ ರಾಯಭಾರಿ ಕೆಲಸಕ್ಕೆ ತಕ್ಕವನು.

ಇದನ್ನು ತಿಳಿಯಲು ಯಶೋವರ್ಧನನೊಂದು ಉಪಾಯ ಹೂಡಿದ. ತನ್ನ ಆಸ್ಥಾನದಲ್ಲಿ ಸಭಿಕರ ಮಧ್ಯೆ ಸುಳ್ಳಿನ ಸ್ಪರ್ಧೆ ಇಟ್ಟು, "ಎಲ್ಲರಿಗಿಂತಲೂ ಚಮತ್ಕಾರವಾದ ಸುಳ್ಳಾಡುವಾತನಿಗೆ ನನ್ನ ಮಗಳನ್ನು ಕೊಟ್ಟು ವಿವಾಹಮಾಡುವೆನು. ಮತ್ತು ಅರ್ಧರಾಜ್ಯವನ್ನೂ ಕೊಡುವೆನು" ಎಂದು ಹೇಳಿದ ರಾಜ.

ಸಭಿಕರು ಬೆಕ್ಕಸಬೆರಗಾದರು. ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಒಬ್ಬ ವ್ಯಕ್ತಿ ಎದ್ದು ನಿಂತು "ಮಹಾರಾಜರೇ, ನನ್ನ ಬಾಲ್ಯದಲ್ಲಿ ಒಂದು ಬಾರಿ ಪೂರ್ವದಿಕ್ಕಿನಲ್ಲಿ ಸೂರ್ಯೋದಯವನ್ನೂ ಪಶ್ಚಿಮದಲ್ಲಿ ಚಂದ್ರೋದಯವಾಗುತ್ತಿರುವುದನ್ನೂ ಕಂಡೆ" ಎಂದ. "ಬಾಲ್ಯದೆಶೆಯಿಂದ ಮೂಡಲನ್ನು ಪಡವಲೆಂತಲೂ, ಪಡವಲನ್ನು ಮೂಡಲೆಂತಲೂ, ಅಸ್ತಮಯಕಾಲವನ್ನು ಉದಯಕಾಲವೆಂತಲೂ ಭ್ರಮೆಗೊಂಡಿರಬೇಕು" ಎಂದು ರಾಜನು ಉತ್ತರ ಹೇಳಿದ.

ಮತ್ತೊಬ್ಬ ವ್ಯಕ್ತಿ "ಮಹಾಪ್ರಭೂ, ನಮ್ಮೂರಿನಲ್ಲಿ ಕೆಲವರು ಬಿಸಿಲುಕಾಲದಲ್ಲಿ ಬಿಸಿಲಿನ ಕಾವನ್ನು ಪಾತ್ರೆಗಳಲ್ಲಿ ತುಂಬಿಸಿ, ಮಳೆಗಾಲದಲ್ಲಿ ಅದರಿಂದ ಅಡಿಗೆ ಮಾಡಿ

ಜಿ. ಸಿದ್ದಪ್ಪ

ಕೊಳ್ಳುವರು" ಎಂದ. "ಬಹುಶಃ ಅವರು ಸೌದೆ ಖರ್ಚನ್ನೂ ಉಳಿಸಿಕೊಳ್ಳುತ್ತಿರ ಬಹುದು" ಎಂದ ರಾಜ ಮುಸಿನಕ್ಕು.

ಇನ್ನೊಬ್ಬನೆದ್ದು "ಮಹಾರಾಜ, ನಮ್ಮ ಪಟ್ಟಣದಲ್ಲಿ ಕೆಲವರು ತಲೆಕೆಳಗಿಟ್ಟು ನಡೆ ಯುವರು, ಬಾಯಿಂದ ಲಾಲಿಸುವರು, ಮೂಗಿನ ಮೂಲಕ ನೋಡುವರು, ಕಿವಿ ಯಿಂದ ತಿನ್ನುವರು" ಎಂದ. "ಅದರಿಂದಾಗಿ ಅವರ ಜೀವನದಲ್ಲಿ ಆದ ಬದಲಾವಣೆ ಏನು?" ಎಂದು ಕೇಳಿದ ರಾಜ. ಆ ವ್ಯಕ್ತಿ ಸಮಾಧಾನ ಹೇಳಲಾರದಾದನು.

ಈ ರೀತಿ ಎಷ್ಟೋ ಜನ ಸುಳ್ಳು ಹೇಳಿದರು. ಆದರೆ ಅವುಗಳೆಲ್ಲಾ ನಿರರ್ಥಕವಾಗಿಯೂ, ಚಮತ್ಕಾರರಹಿತವಾಗಿಯೂ ಇದ್ದುವು. ಇಂತಹರನ್ನು ರಾಯಭಾರಿಗಳಾಗಿ ಕಳುಹಿಸಿ ದರೆ ಇತರ ರಾಜ್ಯಗಳಲ್ಲಿ ನಗೆಗೀಡಾಗುವು ದೆಂದು ರಾಜನು ಗ್ರಹಿಸಿದ.

ರಾಜನು ದೀರ್ಘಾಲೋಚನೆಯಲ್ಲಿರು ವಾಗ ಒಬ್ಬನು ತಟಕ್ಕನೆ ಎದ್ದು ನಿಂತು "ನನ್ನ ಪಿತ್ರಾರ್ಜಿತವಾದ ರಾಜ್ಯವನ್ನು ನೀವು ಆಕ್ರ ಮಣ ಮಾಡಿಕೊಂಡಿರುವಿರಿ. ಅದಷ್ಟೇ ಅಲ್ಲದೆ ಸುಳ್ಳುಗಾರರಿಗೆ ಇದರಲ್ಲಿ ಅರ್ಧಭಾಗವನ್ನು ಕೊಟ್ಟು ಅನ್ಯಾಕ್ರಾಂತ ಮಾಡಲೆಣಿಸುತ್ತಿರು ವಿರಿ. ಇದಕ್ಕೆ ನಾನೆಷ್ಟುಮಾತ್ರವೂ ಒಪ್ಪುವು ದಿಲ್ಲ," ಎಂದು ಹೇಳಿ ಕುಳಿತುಕೊಂಡನು.

ಕ್ಷಣ ಹೊತ್ತು ರಾಜನು ದಿಗ್ಭ್ರಮೆ ಗೊಂಡನು. ತುಂಬಿದ ಸಭೆಯಲ್ಲಿ ಈ ವ್ಯಕ್ತಿ ಕಾಶಿರಾಜ್ಯ ತನ್ನ ಪಿತ್ರಾರ್ಜಿತವೆಂದಿದ್ದಾನೆ. ಅದು ನಿಜವೆಂದು ಒಪ್ಪಿದುದಾದರೆ ರಾಜ್ಯವ ನ್ನೆಲ್ಲಾ ಅವನಿಗೆ ಕೊಟ್ಟುಬಿಡಬೇಕು. ಸುಳ್ಳು ಎಂದು ಭಾವಿಸಿದರೆ, ಈ ಸಭೆಯಲ್ಲಿ ತನ್ನನ್ನು ಆ ವ್ಯಕ್ತಿ ಸಂದಿಗ್ಧಕ್ಕೆ ಸಿಲುಕಿಸಿರುವನೆಂದು ಒಪ್ಪಿಕೊಳ್ಳಲೇಬೇಕು. ಇದೇ ಚಮತ್ಕಾರ ಪೂರಿತವಾದ ಸುಳ್ಳು. ರಾಜನು ತನ್ನ ಆಸನ ದಿಂದ ಎದ್ದು "ಭೇಷ್, ನೀನೇ ಗೆದ್ದೆ" ಎಂದು ಮೆಚ್ಚುಗೆಯಿತ್ತನು.

ತರುವಾಯ ಆ ವ್ಯಕ್ತಿ ಕಾಶೀರಾಜನ ಅಳಿಯನಾಗಿ, ಕಾಶಿರಾಜ್ಯದಲ್ಲಿ ಒಂದು ಪರಗಣಕ್ಕೆ ಅಧಿಪತಿಯಾಗಿ, ರಾಯಭಾರಿ ಕಾರ್ಯಗಳಲ್ಲಿ ವಿಜಯಭೇರಿ ಹೊಡೆದನು.





# ಕವಿಯ ಸಹಾನುಭೂತಿ

ಕವಿತ್ವವೆಂದರೆ ಕಿವಿ ನಿಮಿರಿಸುವ ಭೋಜರಾಜನ ಪರಿಪಾಲನೆಯಲ್ಲಿ ಕವಿ, ಪಂಡಿತರ ಹೊರತು ಅನ್ಯರಿಗೆ ರಾಜಾದರಣೆ ಲಭಿಸುತ್ತಿರಲಿಲ್ಲ. ವೇದಶಾಸ್ತ್ರಗಳನ್ನು ಮುಗುಚಿ ಹಾಕಿದವರೂ ಸಹ ತಿಂಡಿಗೆ ಗತಿಯಿಲ್ಲದೆ ಇರುವ ಪರಿಸ್ಥಿತಿ ಒದಗಿತು. ಕೆಲವರು ವೇದಾಧ್ಯಯನ ಪರರಾದ ಬ್ರಾಹ್ಮಣರು ಹೇಗಾದರೂ ಒಂದು ಶ್ಲೋಕವನ್ನು ರಚಿಸಿ, ಭೋಜರಾಜನಿಗೆ ನಿವೇದಿಸಿ ಅಷ್ಟೋ ಇಷ್ಟೋ ಬಹುಮಾನ ಸಂಪಾದಿಸಿ ಹೊಟ್ಟೆಹೊರೆದುಕೊಳ್ಳಬೇಕೆಂದು ನಿಶ್ಚಯಿಸಿದರು. ಯಾಕೆಂದರೆ ಭೋಜರಾಜನ ಹತ್ತಿರ ಯಾಚನೆಗೆ ಹೋದರೂ ಶ್ಲೋಕರೂಪದಲ್ಲೇ ಯಾಚಿಸಬೇಕು. ಅವರಿಗೆ ಶ್ಲೋಕ ರಚಿಸಿ ಗೊತ್ತಿಲ್ಲ.

ಒಂದು ದಿನ ಆ ಬ್ರಾಹ್ಮಣರು ಧಾರಾನಗರದ ಭುವನೇಶ್ವರಿ ಆಲಯಕ್ಕೆ ಹೋಗಿ ಶ್ಲೋಕವನ್ನು ಹೆಣೆಯಲು ಕುಳಿತುಕೊಂಡರು. ಸಾಲಿಗೆ ಎಂಟು ಅಕ್ಷರಗಳ ಪ್ರಕಾರ ನಾಲ್ಕು ಪಾದಗಳನ್ನು ರಚಿಸಿದರೆ ಒಂದು ಶ್ಲೋಕವಾಗುವುದೆಂಬ ವಿಷಯ ಅವರಿಗೆ ತಿಳಿದಿತ್ತು. ಆದರೆ ವಿಷಯ ಎಷ್ಟು ಆಲೋಚಿಸಿದರೂ ಹೊಳೆಯಲಿಲ್ಲ. ಅವರನ್ನು ಕಾಡುತ್ತಿದ್ದುದೆಲ್ಲಾ ಒಂದೇ ಒಂದು ಭೋಜನ ಸಮಸ್ಯೆ.

"ಭೋಜನಂ ದೇಹಿ ರಾಜೇಂದ್ರ" ಎಂದು ಕೇಳೋಣವೆಂದು ಒಬ್ಬ ಬ್ರಾಹ್ಮಣನೆಂದ. "ಭೇಷ್, ಸೊಗಸಾಗಿದೆ" ಎಂದರು ಉಳಿದವರು. ಶ್ಲೋಕದ ಒಂದು ಪಾದ ಪೂರ್ತಿಯಾಯಿತು. ಇನ್ನೂ ಮೂರು ಪಾದಗಳನ್ನು ಪೂರ್ಣಗೊಳಿಸಬೇಕು.

"ರಾಜನನ್ನು ಭೋಜನವಿಡಿ ಎಂದು ಹೇಳುವಾಗ ತುಪ್ಪ, ತೊವ್ವೆ ಹಾಕುವಂತೆ ಕೇಳುವುದು ನನಗೆ ಉಚಿತವೆನಿಸುವುದು. "ಘೃತಸೂಪ ಸಮನ್ವಿತಂ" ಎಂದು ಸೇರಿಸೋಣ" ಎಂದ ಮತ್ತೊಬ್ಬ ವಿಪ್ರ. "ಭೇಷ್ ತುಂಬಾ ಸೊಗಸಾಗಿದೆ" ಎಂದು ಮೆಚ್ಚಿಕೊಂಡರು ಮಿಕ್ಕೆಲ್ಲ ಬ್ರಾಹ್ಮಣರು.

"ಭೋಜನಂ ದೇಹಿರಾಜೇಂದ್ರ
ಘೃತಸೂಪ ಸಮನ್ವಿತಂ"

ಕೆ. ಕೆ. ರಾವು

ಅರ್ಧ ಶ್ಲೋಕ ಮುಗಿದಂತಾಯಿತು. ಇನ್ನೂ ಅರ್ಧ ಮಿಕ್ಕಿದೆ. ಆದರೆ ಮತ್ತೇನನ್ನು ಕೇಳಬೇಕೋ ಆ ಬ್ರಾಹ್ಮಣರಿಗೆ ಹೊಳೆಯಲಿಲ್ಲ. ಕೇಳಬೇಕೆಂದಿದ್ದ ತೊವ್ವೆ ಮತ್ತು ತುಪ್ಪದ ಊಟವನ್ನು ಎರಡು ಪಾದಗಳಲ್ಲೇ ಕೇಳಿಬಿಟ್ಟಿರುವರು. ಉಳಿದೆರಡು ಪಾದಗಳಲ್ಲಿ ಕೇಳುವುದಾದರೂ ಏನನ್ನು?

ಈ ಜಟಿಲ ಪ್ರಶ್ನೆ ಬಗೆ ಹರಿಯದೆ ಬ್ರಾಹ್ಮಣರು ತಾಪತ್ರಯ ಪಡುತ್ತಿರುವಾಗ ಮಹಾ ಕವಿ ಕಾಳಿದಾಸನು ಅಲ್ಲಿಗೆ ಬಂದನು. ಶ್ಲೋಕವ ಪಾದಗಳು ಎರಡು ಕುದುರಿ ಮತ್ತೆರಡು ಕುದುರದೆ ಒದ್ದಾಡುತ್ತಿದ್ದ ಬ್ರಾಹ್ಮಣರನ್ನು ನೋಡಿ "ಅಯ್ಯೋ" ಅನ್ನಿಸಿತು ಕಾಳಿದಾಸನಿಗೆ. ಅವರು ರಚಿಸಿದ ಕವಿತ್ವಕ್ಕೆ ಭೋಜರಾಜನು ಒಂದು ಕವಡಿ ಸಹ ಕೊಡುವುದಿಲ್ಲವೆಂದು ಗ್ರಹಿಸಿದ.

"ಅಯ್ಯಾ, ನಿಮಗೆ ಅಭ್ಯಂತರ ವಿಲ್ಲದಿದ್ದ ಪಕ್ಷಕ್ಕೆ ಉಳಿದೆರಡು ಪಾದಗಳನ್ನು ನಾನು ಪೂರ್ತಿಗೊಳಿಸುವೆನು. ಸಂಪೂರ್ಣವಾದ ಶ್ಲೋಕವನ್ನು ಮಹಾರಾಜರಿಗೆ ಸಮರ್ಪಿಸಿ ಬಹುಮಾನ ಸಿಕ್ಕಿದರೆ ತೆಗೆದುಕೊಳ್ಳಿ" ಎಂದು ಹೇಳಿದ ಕಾಳಿದಾಸ.

"ಮಹಾಭಾಗ್ಯ ಸ್ವಾಮಿ. ಸಮಯಕ್ಕೆ ಸರಿಯಾಗಿ ದೇವರಂತೆ ಇಲ್ಲಿಗೆ ಬಂದಿರಿ. ಉಳಿದೆರಡು ಪಾದಗಳನ್ನೂ ಬರೆದುಕೊಡಿ. ನಿಮ್ಮ ಹೆಸರು ಹೇಳಿಕೊಂಡು ಬದುಕುವೆವು" ಎಂದು ಅಂಗಲಾಚಿದರು ಬ್ರಾಹ್ಮಣರು. ನೀವೀಗ "ಭೋಜ ಭೂಪತಿಯನ್ನು ತುಪ್ಪ ತೊವ್ವೆ



ಯೊಂದಿಗೆ ಊಟವಿಡುವಂತೆ ಕೇಳಿರುವಿರಿ. ಶರತ್ಕಾಲದ ಚಂದ್ರನ ಬೆಳುದಿಂಗಳಂತೆ ಬಿಳಿದಾದ ಮೊಸರಿನೊಂದಿಗೆ ಊಟವಿಡುವಂತೆ ಕೇಳಿದರೆ ಸೊಗಸೆನಿಸುವುದು'' ಎಂದ ಕಾಳಿದಾಸ. ಮೊಸರಿನ ಮಾತು ಕೇಳಿದ ಕೂಡಲೇ ಬ್ರಾಹ್ಮಣರ ಬಾಯಲ್ಲಿ ನೀರೂರಿತು. ಅವರು ಆನಂದ ಭರಿತರಾಗಿ, "ಎಲ್ಲೀ, ಹೇಗೆ?" ಎಂದು ಕೇಳಿದರು.

'ಮಹೀಷಂ ಚ ಶರಚ್ಚಂದ್ರ
ಚಂದ್ರಿಕಾ ಧವಳಂ ದಧಿ'

ಎಂದು ಕಾಳಿದಾಸನು ಅವರ ಶ್ಲೋಕವನ್ನು ಪೂರ್ತಿಗೊಳಿಸಿದನು. ಅದರ ಗೂಢಾರ್ಥವೂ ಮಾಧುರ್ಯವೂ ಅವರಿಗೆ ತಿಳಿಯದಿದ್ದರೂಸಹ ಶ್ಲೋಕ ಪೂರ್ತಿಯಾಗಿ, ತಮ್ಮ ಕೆಲಸ ಮುಗಿಯಿತೆಂಬ ಆನಂದದಿಂದ ಬ್ರಾಹ್ಮಣರು ಕಾಳಿದಾಸನಿಗೆ ಧನ್ಯವಾದಗಳನ್ನು ಅರ್ಪಿಸಿ, ಅಲ್ಲಿಂದ ಲಗುಬಗನೆ ತೆರಳಿದರು.

ಅವರು ಮಾರನೆಯ ದಿನ ರಾಜಸಭೆಗೆ ಹೋದರು. ಬಹಳ ಪ್ರಯಾಸಪಟ್ಟ ನಂತರ ರಾಜನ ದರ್ಶನ ಲಭಿಸಿತು. ಅವರು ಭೋಜರಾಜನ ಮುಂದೆ ಹೋಗಿ ನಿಂತು ತಾವು ಕಂಠಸ್ಥ ಮಾಡಿಕೊಂಡಿದ್ದ ಶ್ಲೋಕವನ್ನು,

"ಭೋಜನಂ ದೇಹಿ ರಾಜೇಂದ್ರಾ
ಘೃತಸೂಪ ಸಮನ್ವಿತಂ
ಮಹೀಷಂ ಚ ಶರಚ್ಚಂದ್ರ
ಚಂದ್ರಿಕಾ ಧವಳಂ ದಧಿ"

ಎಂದು ಹೇಳಿದರು.

ಆ ಶ್ಲೋಕವನ್ನು ಕೇಳಿದ ಭೋಜರಾಜನು "ಈ ಶ್ಲೋಕದ ಮೊದಲೆರಡು ಪಾದಗಳನ್ನು ಬರೆದವರಿಗೆ ಕವಿತ್ವ ಬರುವುದಿಲ್ಲ. ಆದರೆ ಉಳಿದೆರಡು ಪಾದಗಳನ್ನು ಕಾಳಿದಾಸನೇ ಹಣೆದಿರಬೇಕು. ಆ ಎರಡು ಪಾದಗಳ ಒಂದೊಂದು ಅಕ್ಷರಕ್ಕೆ ಒಂದೊಂದು ಲಕ್ಷವರಹ ಕೊಟ್ಟು ಈ ಬ್ರಾಹ್ಮಣರನ್ನು ಕಳುಹಿಸಿ" ಎಂದ. ಬ್ರಾಹ್ಮಣರು ಬೆರಗಾದರು. ಸಭೆಯ ಸುತ್ತಲೂ ತಮ್ಮ ದೃಷ್ಟಿ ಬೀರಿದರು. ಕಾಳಿದಾಸನು ಅಲ್ಲಿದ್ದನು. ಆತನೇ ತಮಗೆ ಭಿಕ್ಷೆಯಿತ್ತನೆಂದು ಭಾವಿಸಿ, ತಮಗೆ ಲಭ್ಯವಾದ ಧನವನ್ನು ತೆಗೆದುಕೊಂಡು ಆ ಬ್ರಾಹ್ಮಣರು ತಮ್ಮ ದಾರಿ ಹಿಡಿದರು.






ಪೂರ್ವಕಾಲದಲ್ಲಿ ಉಜ್ಜಯಿನೀ ನಗರದಲ್ಲಿ ಯಶೋವಂತನೆಂಬ ಬ್ರಾಹ್ಮಣನೊಬ್ಬನಿದ್ದನು. ಆತನ ಮಗನ ಹೆಸರು ಶಶಿಭೂಷಣ. ಶಶಿಭೂಷಣನು ತುಂಬಾ ಅಂದಗಾರನೂ, ಸುಗುಣಿಯೂ ಆಗಿದ್ದನು. ಇವನು ಗುರುಗಳ ಬಳಿ ವಿದ್ಯೆ ಕಲಿಯುವಾಗ ವಿಜಯಸೇನನೆಂಬ ಕ್ಷತ್ರಿಯಕುಮಾರನ ಸ್ನೇಹ ಬೆಳೆಯಿತು.

ಒಂದು ದಿವಸ ವಿಜಯಸೇನನೊಂದಿಗೆ ಅವನ ತಂಗಿ ಮದಿರಾವತಿ ಗುರುಗಳ ಮನೆಗೆ ಬಂದಳು. ಆಕೆಯೂ ಅಸಾಧಾರಣ ಅಂದಗಾತಿ. ಆಕೆಯನ್ನು ಕಂಡು ಶಶಿಭೂಷಣನಿಗೆ ಆಕೆಯಲ್ಲಿ ಅನುರಾಗ ಉಂಟಾಯಿತು.

ಮದಿರಾವತಿ ಮನೆಗೆ ಹಿಂತಿರುಗಿ ಶಶಿಭೂಷಣನನ್ನು ಕುರಿತು ತನ್ನ ತಾಯಿಯೊಂದಿಗೆ ತುಂಬಾ ಗೌರವವಾಗಿ ಮಾತನಾಡಿದಳು. ಶಶಿಭೂಷಣನನ್ನು ಒಂದು ಸಲ ಮನೆಗೆ ಕರೆತರುವಂತೆ ತಾಯಿ ವಿಜಯಸೇನನಿಗೆ ಹೇಳಿದಳು.

ಮರುದಿನ ಶಶಿಭೂಷಣನನ್ನು ಮನೆಗೆ ಕರೆತಂದ ವಿಜಯಸೇನ. ಅವನು ತನ್ನ ತಂದೆಯೊಂದಿಗೇನೋ ಮಾತನಾಡಲು ಅಕಸ್ಮಾತ್ ಒಳಗೆ ಹೋಗಬೇಕಾಗಿ ಬಂತು. ಆಗ ಮದಿರಾವತಿಯು ಗೆಳತಿಯಾದ ಧಾತ್ರಿ ಒಂಟಿಯಾಗಿದ್ದ ಶಶಿಭೂಷಣನಲ್ಲಿಗೆ ಬಂದು, ಒಂದು ಸುಂದರವಾದ ಹೂವಿನ ಹಾರವನ್ನು ಕೊಡುತ್ತಾ "ಇದನ್ನು ನನ್ನ ಸಖಿ ಮದಿರಾವತಿ ಯಾರಿಗೂ ತಿಳಿಯದಂತೆ ನಿಮಗಾಗಿ ಸಿದ್ಧಗೊಳಿಸಿರುವಳು, ಸ್ವೀಕರಿಸಿ" ಎಂದಳು.

"ನಿನ್ನ ಸಖಿಗೆ ಬೇಕಾದರೆ ನನ್ನ ಪ್ರಾಣವನ್ನೇ ಕೊಟ್ಟೇನು ಎಂದು ಹೇಳುವಿರಾ?" ಎಂದ ಶಶಿಭೂಷಣ ಧಾತ್ರಿಯೊಂದಿಗೆ.

ಅಂದಿನಿಂದ ಶಶಿಭೂಷಣ ಮದಿರಾವತಿಯರು ಪರಸ್ಪರ ಮಾತನಾಡ ತೊಡಗಿದರು. ದಿನದಿನಕ್ಕೆ ಅವರ ಪ್ರೇಮ ಬೆಳೆಯುತಿತ್ತು.

ಹೀಗಿರಲು ಒಂದು ದಿವಸ ಒಬ್ಬ ಕ್ಷತ್ರಿಯ ಯುವಕನು ಬಂದು ಮದಿರಾವತಿಯನ್ನು ಕೊಟ್ಟು ತನಗೆ ವಿವಾಹ ಮಾಡಬೇಕೆಂದು ಆಕೆಯ ತಂದೆಯನ್ನು ಕೇಳಿದ. ತನ್ನ ಮಗಳು ಮತ್ತೋರ್ವನನ್ನು ಪ್ರೇಮಿಸುತ್ತಿರುವಳೆಂಬ

ಎಸ್. ಗೋಪಾಲರಾವು




ವಿಷಯ ಅರಿಯದೆ ಆಕೆಯ ತಂದೆ ಸಮ್ಮತಿಸಿದನು. ಲಗ್ನವನ್ನೂ ನಿಶ್ಚಯಿಸಲಾಯಿತು.

ಅಂದಿನಿಂದ ಶಶಿಭೂಷಣನಿಗೆ ಮನೋರೋಗ ಪ್ರಾಪ್ತವಾಯಿತು. ಒಮ್ಮೆ ಮದಿರಾವತಿಯನ್ನು ಕಂಡು ತನ್ನ ಮನೋವೇದನೆಯನ್ನು ಕೊಂಚ ಮಟ್ಟಿಗಾದರೂ ಕಡಿಮೆ ಮಾಡಿಕೊಳ್ಳಬೇಕೆಂದು ಬಹಳವಾಗಿ ಆಶಿಸಿದ. ಆದರೆ ಅದು ಸಾಧ್ಯವಾಗದಾಯಿತು.

ಮದುವೆಯ ದಿನ ಬಂದಿತು. ಮದಿರಾವತಿಗೆ ಮಂಗಳಸ್ನಾನ ಮಾಡಿಸಿ ಮದಮಗಳನ್ನು ಶೃಂಗರಿಸಿದರು. ಮಂಗಳವಾದ್ಯಗಳ ಸಮೇತವಾಗಿ ವರನೂ ಬಂದ. ಯಾವುದಾದರೊಂದು ಕಾರಣದಿಂದ ಮದಿರಾವತಿಯ ಮದುವೆ ತಪ್ಪಿಹೋಗಬಹುದೆಂಬ ಆಶೆ ಶಶಿಭೂಷಣನ ಮನಸ್ಸಿನಲ್ಲಿ ಅಲ್ಲಿಯ ತನಕ ನೆಲಸಿತ್ತು. ಅದೀಗ ಮಣ್ಣುಪಾಲಾಯಿತು. ಶಶಿಭೂಷಣನು ಈ ನೋವು ಸಹಿಸುವುದಕ್ಕಿಂತ ಆತ್ಮಹತ್ಯೆ ಮಾಡಿಕೊಳ್ಳುವುದೇ ಉತ್ತಮವೆಂದು ಯೋಚಿಸಿದನು.

'ಮದುವೆಮಣೆಯ ಮೇಲೆ ಕುಳಿತುಕೊಳ್ಳುವ ಮೊದಲು ಮದಿರಾವತಿ ಇತರ ಹೆಣ್ಣುಮಕ್ಕಳೊಂದಿಗೆ ಊರಹೊರಗಿರುವ ಅಮ್ಮನವರ ದೇವಾಲಯಕ್ಕೆ ಬಂದು ಅಲ್ಲಿರುವ ಕಾಮದೇವನನ್ನು ಪೂಜಿಸುವಳು. ಆ ಗುಡಿಗೆ ಹತ್ತಿರದಲ್ಲೇ, ಹಾದಿಯಲ್ಲಿ ಒಂದು ಆಲದಮರವಿದೆ. ಆ ಮರಕ್ಕೆ ನೇಣು ಹಾಕಿಕೊಂಡರೆ ಮದಿರಾವತಿ ತನ್ನ ಶವವನ್ನಾದರೂ ನೋಡಿಯಾಳು' ಎಂದು ಯೋಚಿಸಿ ಶಶಿಭೂಷಣನು ಅಲ್ಲಿಗೆ ಬಂದನು.

ಮದಿರಾವತಿಯ ಗೆಳತಿ ಧಾತ್ರಿ ಅಂದು ಬೆಳಿಗ್ಗೆ ಶಂಖಹ್ರದವೆಂಬ ನದಿಯಲ್ಲಿ ಸ್ನಾನ ಮಾಡಲು ಹೊರಟಳು. ಆ ನದಿಯತೀರದಲ್ಲಿ ಹೂ ಬಿಡಿಸುವಾಗ ಆಕೆಗೆ ಸೋಮದತ್ತನೆಂಬ ಬ್ರಾಹ್ಮಣತರುಣ ಕಾಣಿಸಿದನು. ಆತನು ಎವೆಯಿಕ್ಕದೆ ತನ್ನ ಕಡೆಗೇ ನೋಡುತ್ತಿರುವುದನ್ನು ಕಂಡು ಧಾತ್ರಿ ನಾಚಿದಳು.

ಅನಿರೀಕ್ಷಿತವಾಗಿ ದೂರದಲ್ಲಿ ಏನೋ ಕೋಲಾಹಲವಾಗುತ್ತಿದ್ದಂತೆ ಕೇಳಿಸಿತು. ಸರಪಳಿ ಕಿತ್ತುಕೊಂಡ ಸಲಗನೊಂದು ಬಿರುಸಾಗಿ ಅವರಿದ್ದ ಕಡೆಗೆ ನುಗ್ಗುತಿತ್ತು. ಏನು ಮಾಡಬೇಕೋ ತಿಳಿಯದೆ ಧಾತ್ರಿ ದಿಙ್ಮೂಢಳಾಗಿ

ರಲು, ಪರದೇಶಿ ಸೋಮದತ್ತನು ಆಕೆಯನ್ನು ಎತ್ತಿಕೊಂಡು ಹೋಗಿ ದೂರದಲ್ಲಿದ್ದ ಜನರ ಬಳಿ ತಂದುಬಿಟ್ಟನು.

ಅಷ್ಟು ಧೈರ್ಯಸಾಹಸಗಳಿಂದ ತನ್ನನ್ನು ಕಾಪಾಡಿದ ಆ ಯುವಕನ ಪರಿಚಯ ಮಾಡಿ ಕೊಳ್ಳಬೇಕೆಂದು ಧಾತ್ರಿಯು ಹವಣಿಸಿದಳು. ಆದರೆ ಆ ಮದಿಸಿದ ಆನೆ ಈಗ ಜನರಮೇಲೆ ನುಗ್ಗಿತು. ಜನ ಚಲ್ಲಾಪಿಲ್ಲಿಯಾಗಿ ಚದುರಿದರು. ಸೋಮದತ್ತನೂ ಓಡಿಹೋದನು. ಧಾತ್ರಿ ಯನ್ನು ಕಂಡು ಆಕೆಯ ವಿಷಯವನ್ನು ತಿಳಿದು ಕೊಳ್ಳಬೇಕೆಂಬ ಕುತೂಹಲದಿಂದ ಆತನು ಮತ್ತೆ ಅಲ್ಲಿಗೆ ಬಂದು ನೋಡಲು ಆಕೆ ಕಾಣಿಸ ಲಿಲ್ಲ. ಮದಿರಾವತಿಯ ಲಗ್ನಕ್ಕಾಗಿ ಆಕೆ ಅಲ್ಲಿಂದ ಹೊರಟುಬಿಟ್ಟಿದ್ದಳು.

ತಾನು ಆಪತ್ತಿನಿಂದ ಕಾಪಾಡಿದ ಯುವತಿ ಯಾರೋ, ಆಕೆಯ ಹೆಸರೇನೋ ಸೋಮ ದತ್ತನಿಗೆ ತಿಳಿಯದು. ಆಕೆಯನ್ನು ನೋಡುವ ತನಕ ನಿದ್ದೆಬಾರದೆಂದು ನಿರ್ಧರಿಸಿ ಹಾಗೇ ಬಹಳದೂರ ನಡೆದನು.

ಹಾಗೆ ನಡೆದು ನಡೆದು ಅಮ್ಮನವರ ದೇವಾಲಯದ ಸಮೀಪಕ್ಕೆ ಬಂದನು. ಆತ ನಿಗೆ ಹತ್ತಿರದಲ್ಲಿದ್ದ ಆಲದಮರಕ್ಕೆ ನೇತಾಡು ತ್ತಿದ್ದ ಒಬ್ಬ ಯುವಕನ ಶರೀರ ಕಾಣಿಸಿತು. ಆತನು ಕೂಡಲೇ ಅಲ್ಲಿಗೆ ಹೋಗಿ ಆ ಶರೀರ ವನ್ನು ಕೆಳಗಿಳಿಸಿ ನೋಡಿದ. ಶಶಿಭೂಷಣನು ಮೂರ್ಛೆಗೊಂಡಿದ್ದಾನೆ. ಪ್ರಾಣವಿತ್ತು. ಸೋಮದತ್ತನು ಶಶಿಭೂಷಣನಿಗೆ ಸಕಲ ಉಪಚಾರಗಳನ್ನೂ ಮಾಡಿದ.





ಕೊಂಚಹೊತ್ತಿಗೆ ಶಶಿಭೂಷಣನಿಗೆ ಅರಿವುಂಟಾಯಿತು. ಅವನು ಚೇತರಿಸಿಕೊಂಡು ಎದ್ದು ಕುಳಿತು ಸೋಮದತ್ತನನ್ನು ನೋಡಿ "ನನ್ನ ಪ್ರಾಣವನ್ನುಳಿಸಿದ ದಯಾಮಯನಾದ ನೀನು ಯಾರಪ್ಪಾ? ನನ್ನನ್ನೇಕೆ ಕಾಪಾಡಿದೆ? ನನ್ನಬಾಳು ನಿರರ್ಥಕವಾದುದು" ಎಂದು ತನ್ನ ಕತೆಯನ್ನು ಹೇಳಿದ.

ಎಲ್ಲವನ್ನೂ ಕೇಳಿದ ಸೋಮದತ್ತನು "ಹುಚ್ಚನೇ, ಇದೇಯೇ ನಿನ್ನ ಪೌರುಷ? ಧೈರ್ಯಬೇಕಯ್ಯಾ ಬಾಳುವೆಯಲ್ಲಿ. ನಾನೂ ನಿನ್ನಂತೆ ಒಬ್ಬ ಕನ್ಯೆಯನ್ನು ಪ್ರೀತಿಸಿರುವೆನು. ಆಕೆಯಾರೋ, ಎಲ್ಲಿರುವಳೋ ತಿಳಿಯದೆ ಹುಡುಕಾಡತೊಡಗಿರುವೆನು" ಎಂದು ತನ್ನ ಕತೆಯನ್ನು ತಿಳಿಸಿದನು.

ಇವರಿಬ್ಬರು ಈ ರೀತಿ ತಮ್ಮ ಕತೆಗಳನ್ನು ವಿನಿಮಯ ಮಾಡಿಕೊಳ್ಳುತ್ತಿರಲು ಅವರಿಗೆ ಮಂಗಳ ವಾದ್ಯಗಳು ಕೇಳಿಸಿದುವು.

"ಅಗೋ, ಮದಿರಾವತಿ ಕಾಮದೇವನನ್ನು ಪೂಜಿಸಲು ಬರುತ್ತಿದ್ದಾಳೆ" ಎಂದ ಶಶಿಭೂಷಣ. "ಹಾಗಾದರೆ ನಾವು ದೇವಾಲಯದಲ್ಲಿ ವಿಗ್ರಹದ ಹಿಂದೆ ಅವಿತಿಟ್ಟುಕೊಳ್ಳೋಣ ನಡಿ. ಸಮಯಕ್ಕೆ ಯಾವುದಾದರೂ ಉಪಾಯ ಹೊಳೆಯಬಹುದು" ಎಂದ ಸೋಮದತ್ತ.

ಇಬ್ಬರೂ ವಿಗ್ರಹದಹಿಂದೆ ಬಚ್ಚಿಟ್ಟುಕೊಂಡ ಕೊಂಚ ಸಮಯಕ್ಕೆಲ್ಲಾ ಮದಿರಾವತಿ ತನ್ನ ಜೊತೆಗಾತಿಯರೊಂದಿಗೆ ದೇವಾಲಯವನ್ನು ತಲುಪಿದಳು. ಉಳಿದವರನ್ನೆಲ್ಲಾ ಗುಡಿಯ ಹೊರಗಡೆ ನಿಲ್ಲಿಸಿ ತಾನೋರ್ವಳೇ ಗರ್ಭಗುಡಿಯನ್ನು ಸೇರಿ ಬಾಗಿಲು ಮುಚ್ಚಿ ಅಗಳಿ ಹಾಕಿಕೊಂಡಳು. ಬಳಿಕ,

"ಓ, ಕಾಮದೇವಾ, ನಾನು ಒಬ್ಬನನ್ನು ಪ್ರೇಮಿಸಿದರೆ ನನ್ನನ್ನು ಮತ್ತೊಬ್ಬನಿಗೆ ಕೊಟ್ಟು ಏಕೆ ಮದುವೆ ಮಾಡಿಸುತ್ತಿರುವೆ? ಈ ಜನ್ಮದಲ್ಲಿ ನನ್ನ ಕೋರಿಕೆ ನೆರವೇರದಿದ್ದರೆ ಮತ್ತೊಂದು ಜನ್ಮದಲ್ಲಿಯಾದರೂ ಶಶಿಭೂಷಣನ ಸತಿಯಾಗುವಂತೆ ಅನುಗ್ರಹಿಸು, ತಂದೆಯೇ" ಎಂದು ಪ್ರಾರ್ಥಿಸಿ, ಮೇಲುಮುಸುಕನ್ನು ಕೊರಳಿನ ಸುತ್ತಾ ಬಿಗಿದು ನೇಣು ಹಾಕಿಕೊಳ್ಳಲು ಉದ್ಯುಕ್ತಳಾದಳು. ಆಗ ಶಶಿಭೂಷಣನು ವಿಗ್ರಹದ ಹಿಂಭಾಗ

ದಿಂದ ಓಡಿ ಬಂದು ಆಕೆಯನ್ನು ತಡೆ ಹಿಡಿದನು. ಸೋಮದತ್ತನೂ ಹೊರ ಬಂದು "ಮಾತನಾಡಲು ಇದು ಸಮಯವಲ್ಲ. ಮಬ್ಬು ಮುಸುಕತೊಡಗಿದೆ. ನಿನ್ನ ಪ್ರಿಯಳಿಗೆ ನನ್ನ ಬಟ್ಟೆಗಳನ್ನು ತೊಡಿಸಿ ಆಕೆಯನ್ನು ಕರೆದುಕೊಂಡು ಯಾವುದಾದರೂ ಗ್ರಾಮಕ್ಕೆ ಹೊರಡು. ನಾನು ಈಕೆಯ ಉಡುಪನ್ನು ಧರಿಸಿ ಹೊರಬೀಳುತ್ತೇನೆ" ಎಂದು ಉಪಾಯ ಹೇಳಿದನು ಸೋಮದತ್ತ.

ಸೋಮದತ್ತನು ಮದಿರಾವತಿಯ ಮದುವೆಯ ವಸ್ತ್ರಾಭರಣಗಳನ್ನು ಧರಿಸಿ ಮುಸುಕೆಳೆದು ಮುಖ ಕಾಣಿಸದಂತೆ ಮಾಡಿಕೊಂಡು ಅಗಳಿ ತೆಗೆದು ಹೊರಬಿದ್ದ. ಜೊತೆಗಾತಿಯರು ಮದಿರಾವತಿ ಹಿಂತಿರುಗಿದಳೆಂದು ಭಾವಿಸಿ, ಹಾಡುತ್ತಾ ತಾಳಮೇಳಗಳೊಂದಿಗೆ ಹಿಂತಿರುಗಿದರು. ಅವರು ಅತ್ತ ಹೊರಟಕೂಡಲೇ ಪುರುಷ ವೇಷಧಾರಿ ಮದಿರಾವತಿ ಮತ್ತು ಶಶಿಭೂಷಣರು ಕಾಡುದಾರಿಯಲ್ಲಿ ರಾತ್ರಿಯೆಲ್ಲಾ ನಡೆದು ಬೆಳಕು ಹರಿಯುವ ವೇಳೆಗೆ ಅಪಲಪುರವೆಂಬ ಊರನ್ನು ಸೇರಿಕೊಂಡರು. ಅಲ್ಲೊಬ್ಬ ಬ್ರಾಹ್ಮಣನು ಅವರಿಗೆ ತನ್ನ ಮನೆಯಲ್ಲಿ ಆಶ್ರಯ ನೀಡಿದನು. ಅಲ್ಲೇ ಅವರು ಶಾಸ್ತ್ರೋಕ್ತವಾಗಿ ವಿವಾಹ ಮಾಡಿಕೊಂಡರು.

ಇತ್ತ ಮದಿರಾವತಿ ವೇಷದಲ್ಲಿದ್ದ ಸೋಮದತ್ತನು ಮದುವೆಯ ಮನೆಗೆ ಬರುವ ವೇಳೆಗೆ ಧಾತ್ರಿ ಶಂಖಹ್ರದ ನದಿಯಿಂದ ಹಿಂತಿರುಗಿದಳು. ತನಗೆ ಉಂಟಾದ ಅನುಭವವನ್ನು ಪ್ರಿಯಸಖಿಗೆ ಹೇಳಲು ಕಾತುರಳಾಗಿದ್ದಳು.



ಆದಕಾರಣ ಧಾತ್ರಿ ಮದಿರಾವತಿಯ ತೋಳು ಹಿಡಿದು "ಸಖಿ, ನಿನ್ನೊಂದಿಗೆ ಒಂದು ರಹಸ್ಯ ಹೇಳುವೆನು. ಸ್ವಲ್ಪ ಈಕಡೆಬಾ." ಎಂದು ಒಂದು ಕೊಠಡಿಗೆ ಆಕೆಯನ್ನು ಕರೆದುಕೊಂಡು ಹೋದಳು. ಮುಸುಕಿನ ಮೂಲಕ ಧಾತ್ರಿಯನ್ನು ಗುರುತಿಸಿದ ಸೋಮದತ್ತನು ಅವಾಕ್ಕಾದನು. "ನಾನು ಕನಸುಗಾಣುತ್ತಿರುವೆನೇ?" ಎಂದು ತನಗೇ ಪ್ರಶ್ನಿಸಿಕೊಂಡನು.

"ಸಖಿ. ನಿನಗೆ ಪ್ರಿಯವಲ್ಲದವನು ಪತಿಯಾಗುವನು. ನಿನ್ನ ತಳಮಳವನ್ನು ಬಲ್ಲೆ. ನನ್ನ ಬಾಧೆಯನ್ನು ಸ್ವಲ್ಪ ಸ್ಮರಿಸಿಕೊಂಡು ನೋಡು. ಏಕೆಂದರೆ ನಾನು ಅಭಾಗ್ಯವತಿ. ನಿನ್ನಂತೆಯೇ ನಾನೂ ಒಬ್ಬ ಯುವಕನನ್ನು ಪ್ರೀತಿಸಿರುವೆನು. ಆದರೆ ಆತನು ಯಾರೋ, ಹೆಸರೇನೋ, ಎಲ್ಲಿರುವನೋ ಒಂದನ್ನೂ ತಿಳಿಯೆ. ನಿನ್ನ ಪ್ರಿಯನನ್ನು ನೀನು ಮತ್ತೆ ನೋಡಬಹುದು. ನನಗೆ ಅದೂಇಲ್ಲ" ಎಂದು ಧಾತ್ರಿ ತನ್ನ ಕತೆಯನ್ನೆಲ್ಲಾ ಹೇಳಿದಳು.

ಇದನ್ನೆಲ್ಲಾ ಕೇಳಿ ಸೋಮದತ್ತನಿಗೆ ಪರಮಾನಂದವಾಯಿತು. ಧಾತ್ರಿ ಮಾತು ಮುಗಿಸಿದನಂತರ ತನ್ನ ಮುಸುಕನ್ನು ಮೆಲ್ಲನೆ ಸರಿಸಿದನು. ಧಾತ್ರಿಯ ಆಶ್ಚರ್ಯಕ್ಕೆ ಆನಂದಕ್ಕೆ ಮಿತಿಯಿಲ್ಲ. ಸೋಮದತ್ತನು ನಡೆದುದನ್ನೆಲ್ಲಾ ವಿವರಿಸಿ, ಮದಿರಾವತಿ ಶಶಿಭೂಷಣನೊಂದಿಗೆ ಓಡಿಹೋದಳೆಂದು ತಿಳಿಸಿದನು. ಧಾತ್ರಿ ತನ್ನ ಕಣ್ಣುಗಳನ್ನು ತಾನೇ ನಂಬದಾದಳು.

"ನಾವು ಹೀಗೆ ಕತೆ ಹೇಳಿಕೊಳ್ಳುತ್ತಾ ಕುಳಿತರೆ ಲಾಭವಿಲ್ಲ. ನಾವೂ ಬೇಗ ಇಲ್ಲಿಂದ ಪರಾರಿಯಾಗದಿದ್ದರೆ ಪ್ರಮಾದಕ್ಕೆ ಒಳಗಾಗುವೆವು. ಪಲಾಯನಮಾಡುವ ಉಪಾಯ ಯೋಚಿಸು" ಎಂದ ಸೋಮದತ್ತ.

ಧಾತ್ರಿ ತನ್ನ ಆಭರಣಗಳನ್ನೆಲ್ಲಾ ಮೂಟೆಗಟ್ಟಿಕೊಂಡು ಹಿತ್ತಲಮಾರ್ಗವಾಗಿ ಸೋಮದತ್ತನನ್ನು ಹಿಂದಿಟ್ಟುಕೊಂಡು ಹೊರಬಿದ್ದಳು. ಕತ್ತಲಲ್ಲಿ, ಮರಗಳ ಮರೆಯಲ್ಲಿ ನಡೆದು ಊರಾಚೆ ಸೇರಿದರು. ಕೆಲವು ದಿನ ಹೀಗೇ ಪ್ರಯಾಣಮಾಡಿ ಒಂದು ಅಗ್ರಹಾರವನ್ನು ಸೇರಿ, ಅಲ್ಲಿ ಮದುವೆ ಮಾಡಿಕೊಂಡು ಸುಖವಾಗಿ ಕಾಲ ಕಳೆಯುತ್ತಿದ್ದರು.






# ಸವಾಲು

ಒಂದು ದೇಶದಲ್ಲಿ ಒಬ್ಬ ಬಡವನಿದ್ದನು. ಅವನು ತನ್ನ ಸಂಸಾರವನ್ನು ನಡೆಸಲಾಗದೆ ರಾಜನಲ್ಲಿಗೆ ಹೋಗಿ ಸಹಾಯವನ್ನು ಬೇಡಿದನು. ರಾಜನು ಅವನ ಪ್ರಾರ್ಥನೆಯನ್ನು ಕೇಳಿ, 'ನಿನಗೆ ನಾಲ್ಕು ಪ್ರಶ್ನೆಗಳನ್ನು ಹಾಕುತ್ತೇನೆ. ಎಲ್ಲಕ್ಕೂ ವೇಗವಾದುದು ಯಾವುದು? ಎಲ್ಲಕ್ಕೂ ಬಲವುಳ್ಳದ್ದು ಯಾವುದು? ಎಲ್ಲಕ್ಕೂ ಮೆತ್ತಗಿರುವುದು ಯಾವುದು? ಎಲ್ಲಕ್ಕೂ ಆನಂದದಾಯಕವಾಗಿರುವುದು ಯಾವುದು? ಈ ಪ್ರಶ್ನೆಗಳಿಗೆ ನಾಳೆಯೊಳಗಾಗಿ ಉತ್ತರಹೇಳಿದೆಯಾದರೆ ನಿನಗೆ ಸಹಾಯುಮಾಡುವೆನು" ಎಂದ.

ಬಡವನು ಈ ಪ್ರಶ್ನೆಗಳನ್ನು ಮೆಲಕು ಹಾಕುತ್ತಾ ಮನೆ ಸೇರಿಕೊಂಡ. ಯೋಚಿಸುತ್ತಾ ಒಂದುಕಡೆ ಕುಳಿತಿದ್ದ.

ಹದಿನೇಳು ವರ್ಷದ ಮಗಳು ತಂದೆಯ್ಯ ಮೌನದ ಕಾರಣವನ್ನು ವಿಚಾರಿಸಿದಳು. ಬಡವ ಎಲ್ಲವನ್ನೂ ಹೇಳಿ ಉಸಿರುಬಿಟ್ಟನು. ಮಗಳು ನಗುತ್ತ "ಹುಷ್, ಇದಕ್ಕೇಕೆ ಇಷ್ಟು ಗಾಬರಿಬೀಳುವಿರಿ. ಎಲ್ಲಕ್ಕೂ ವೇಗವಾದುದು ಗಾಳಿ; ಎಲ್ಲಕ್ಕೂ ಬಲವಾದದು ಭೂಮಿ; ಏಕೆಂದರೆ ಎಲ್ಲ ಬಲಶಾಲಿಯಾದ ಪ್ರಾಣಿಗಳಿಗೂ ಬಲವೀಯುವುದು ಭೂಮಿತಾಯಿ. ಎಲ್ಲಕ್ಕಿಂತಲೂ ಮೆತ್ತಗಿರುವುದು ಕೈ; ಹಂಸತೂಲಿಕಾತಲ್ಪದಲ್ಲಿ ಮಲಗಿರುವಾತನೂ ಸಹ ಕೈ ಮಡಚಿ ತಲೆಯ ಕೆಳಗಿಟ್ಟುಕೊಳ್ಳುತ್ತಾನೆ. ಎಲ್ಲಕ್ಕಿಂತಲೂ ಆನಂದದಾಯಕವಾಗಿರುವುದು ನಿದ್ದೆ. ಬೇರೆ ಏತರಿಂದಲೂ ನಿವಾರಣೆಯಾಗದ ದುಃಖ, ನಿದ್ದೆಯಿಂದ ಪರಿಹಾರವಾಗುತ್ತದೆ" ಎಂದಳು.

ಈ ಉತ್ತರಗಳಿಂದ ಆ ಬಡವನು ಸಮಾಧಾನ ಹೊಂದಿ ಮಾರನೇಯ ದಿನ ಬೆಳಗ್ಗೆ ರಾಜನ ಬಳಿಗೆ ಹೋಗಿ ಆತನು ಹಾಕಿದ ಪ್ರಶ್ನೆಗಳಿಗೆ ಜವಾಬು ಹೇಳಿದ.

"ಈ ಉತ್ತರಗಳು ನಿನ್ನ ಸ್ವಂತದ್ದೋ, ಇಲ್ಲ ಬೇರೆಯಾರಾದರೂ ನಿನಗೆ ಹೇಳಿದರೋ?" ಎಂದು ಕೇಳಿದ ರಾಜ. "ಹದಿನೇಳು ವರ್ಷದ ನನ್ನ ಪುತ್ರಿ ಹೇಳಿದಳು"

ಎಲ್. ನಾರಾಯಣಾಚಾರ್ಯ



ಎಂದು ಆ ಬಡವ ಸತ್ಯವನ್ನೆ ಹೇಳಿದ. ರಾಜನು ಆಶ್ಚರ್ಯಹೊಂದಿ "ನಿನ್ನ ಮಗಳು ಅಷ್ಟು ಬುದ್ಧಿವಂತಳೇ? ಈ ಎಳೆಯನ್ನು ತೆಗೆದುಕೊಂಡು ಹೋಗಿ ನಿನ್ನ ಮಗಳಿಗೆ ಕೊಟ್ಟು ನಾಳೆ ಯೊಳಗಾಗಿ ನನಗೊಂದು ಉತ್ತರೀಯವನ್ನು ನೇಯುವಂತೆ ತಿಳಿಸು" ಎಂದು ಗೇಣುದ್ದದ ಎಳೆಯೊಂದನ್ನು ಆ ಬಡವನ ಕೈಗೆಕೊಟ್ಟ ರಾಜ.

ಬಡವನು ಹತಾಶನಾಗಿ ಮನೆಗೆ ಹಿಂತಿರುಗಿದ. ತಂದೆಯನ್ನು ನೋಡಿ ಮಗಳು "ಏನಪ್ಪಾ, ರಾಜರಿಗೆ ಇನ್ನೂ ನಿನ್ನಲ್ಲಿ ದಯೆಯುಂಟಾಗಲಿಲ್ಲವೇ?" ಎಂದಳು.

"ಅವರು ಇನ್ನೊಂದು ಪರೀಕ್ಷೆ ಕೊಟ್ಟಿರುವರು. ಈ ನೂಲು ಎಳೆಯಿಂದ ನಾಳೆಯೊಳಗಾಗಿ ನೀನು ಅವರಿಗೆ ಒಂದು ಜರತಾರಿ ಉತ್ತರೀಯ ನೇದುಕೊಡಬೇಕಂತೆ" ಎಂದ.

"ಅದೇನುಮಹಾ! ಅಪ್ಪಾ, ನೀನೊಂದು ಹಂಚಿಕಡ್ಡಿ ತೆಗೆದುಕೊಂಡು ಹೋಗಿ ರಾಜನಿಗೆ ಕೊಟ್ಟು, ಅದರಿಂದ ಒಂದು ಮಗ್ಗ ತಯಾರು ಮಾಡಿಸಿ ಇಂದು ಸಂಜೆಯೊಳಗಾಗಿ ಕೊಡಲು ಹೇಳು. ಅದರಿಂದ ನಾನು ಉತ್ತರೀಯವನ್ನು ನೇಯುತ್ತೇನೆ" ಎಂದಳು ಆ ಹುಡುಗಿ.

ಬಡವನು ಹಂಚಿಕಡ್ಡಿಯೊಂದನ್ನು ತೆಗೆದುಕೊಂಡು ರಾಜನಲ್ಲಿಗೆ ಹೋಗಿ ಮಗಳು ಹೇಳಿದುದನ್ನು ತಿಳಿಸಿದ. ರಾಜ ಕ್ಷಣಕಾಲ ಯೋಚಿಸಿ "ಏನೋ ಅಂತ ಭಾವಿಸಿದೆ. ನಿನ್ನ ಮಗಳು ತುಂಬಾ ಜಾಣೆ. ನೂರು ಕೋಳಿ ಮೊಟ್ಟೆಗಳನ್ನು ಕೊಡಿಸುವೆನು. ಅವುಗಳನ್ನು ಕಾವಿಗಿಟ್ಟು ನಾಳೆ ಬೆಳಗಾಗುವ ಹೊತ್ತಿಗೆ ಮರಿಮಾಡಿಸುವಂತೆ ಹೇಳು" ಎಂದ ರಾಜ.

ಇದೇನೋ ಪ್ರಮಾದಕ್ಕಿಳಿಯಿತೆಂದು ಅಂಜುತ್ತಾ ಬಡವನು ನೂರು ಕೋಳಿಮೊಟ್ಟೆಗಳನ್ನು ತೆಗೆದುಕೊಂಡು ಮನೆಗೆ ಮರಳಿದ. ಅವನ ಮಗಳು ನಿಶ್ಚಿಂತಳಾಗಿ ಆ ಮೊಟ್ಟೆಗಳಿಂದ ಸಾರು, ಪಲ್ಯಮುಂತಾದುವುಗಳನ್ನು ಮಾಡಿ, ಮೂರುಹೊತ್ತು ತಂದೆಗೆ ತಿನ್ನಲಿಕ್ಕಿ, ತಾನೂ ಊಟಮಾಡಿದಳು. ಮಾರನೇಯ ದಿವಸ ತಂದೆಯೊಂದಿಗೆ ಈ ರೀತಿ ಹೇಳಿದಳು: "ಅಪ್ಪಾ, ಅರಸರಬಳಿಗೆ ಹೋಗಿ ಮೊಟ್ಟೆಗಳಿಗೆಲ್ಲಾ ಕಾವುಕೊಟ್ಟಿರುವೆನೆಂದು ಹೇಳು. ಆದರೆ ಒಂದೇ ದಿನದಲ್ಲಿ ಹುಟ್ಟಿದ

ಕೋಳಿಮರಿಗಳು ಏನೂ ಆಹಾರ ಮುಟ್ಟುವು ದಿಲ್ಲ. ಒಂದು ದಿವಸದ ಬೇಸಾಯ ಮಾಡಿ ಬೆಳೆದ ಧಾನ್ಯ ಹಾಕಿದ ಹೊಂತು ಅವು ತಿನ್ನುವಂತಿಲ್ಲ. ಅಂತಹ ಕಾಳು ಇದ್ದರೆ ಕೊಡಿಸುವಂತೆ ಕೇಳು. ಇಲ್ಲವಾದರೆ ಮರಿಗಳೆಲ್ಲಾ ಸಾಯುವವೆಂದು ತಿಳಿಸು"

ಬಡವನು ಅಂತೆಯೇ ರಾಜನಿಗೆ ತಿಳಿಸಿದ. ಆಗ ರಾಜನು "ನೀನು ಈಗ ಮನೆಗೆ ಹೋಗು. ನಾನು ಇನ್ನೊಂದು ಎರಡು ಗಂಟೆಗಳಲ್ಲಿ ನಿಮ್ಮ ಮನೆಗೆ ಬರುತ್ತೇನೆ. ಈ ವಿಷಯ ನಿನ್ನ ಮಗಳಿಗೆ ಹೇಳು" ಎಂದ.

ಈ ಸಂಗತಿ ತಿಳಿದಕೂಡಲೇ ಬಡವನ ಮಗಳು ಮನೆಯನ್ನೆಲ್ಲಾ ಶುಭ್ರವಾಗಿ ಸಾರಿಸಿ ರಂಗೋಲೆಯಿಟ್ಟಳು. ಹೊಸ್ತಿಲಿಗೆ ಅರಸಿನ ಕುಂಕುಮ ಬಳಿದು, ತೋರಣ ಕಟ್ಟಿದಳು. ಸ್ವಲ್ಪಹೊತ್ತಿಗೆ ರಾಜನು ಕುದುರೆಯನ್ನೇರಿ ಬಂದು ಬಡವನ ಮನೆಯಮುಂದೆ ಕುದುರೆಯನ್ನು ನಿಲ್ಲಿಸಿದ. ಅವನನ್ನು ಆಹ್ವಾನಿಸಲು ಬಡವನ ಮಗಳು ಅಂಗದಮೇಲೆ ಒಂದು ಕಾಲಿಟ್ಟು ಹಾಗೇ ನಿಂತುಬಿಟ್ಟಳು.

ಕುದುರೆಯಮೇಲಿದ್ದ ರಾಜನು ಕೆಳಗಿಳಿಯಲೇ ಇಲ್ಲ. ಅವನು ಆ ಹುಡುಗಿಯ ಕಡೆ ನೋಡಿ ಮುಗುಳುನಗುತ್ತಾ "ಅಮ್ಮಯ್ಯಾ, ನಾನು ಕುದುರೆಯಿಂದ ಇಳಿದು ನಿಮ್ಮ ಮನೆಯೊಳಕ್ಕೆ ಬರುತ್ತೇನೋ, ಇಲ್ಲ ಕುದುರೆಯನ್ನು ನಡೆಸಿಕೊಂಡು ಮುಂದುವರಿಯುವೆನೋ ಹೇಳು" ಎಂದ.

ಬಡವನ ಮಗಳು ತುಂಟನಗೆ ನಕ್ಕು "ಮಹಾಪ್ರಭೂ, ತಾವು ನನಗಿಂತಲೂ ಹಿರಿಯರು. ಬುದ್ಧಿಶಾಲಿಗಳು. ವಿದ್ಯಾವಂತರು. ನಾನು ಈಗ ಹೊರಕ್ಕೆ ಬರುವೆನೋ, ಇಲ್ಲ ಒಳಕ್ಕೆ ನಡೆಯುವೆನೋ ತಾವು ಹೇಳುವಿರಾದರೆ ನಿಮ್ಮ ಪ್ರಶ್ನೆಗೆ ನಾನು ಉತ್ತರ ಕೊಡುತ್ತೇನೆ" ಎಂದಳು.

ರಾಜನಿಗೆ ಆಕೆಯ ಮಾತು ಕೇಳಿ ಸಂತೋಷವಾಯಿತು. ಕುದುರೆಯಿಳಿದು ಒಳಕ್ಕೆ ಬಂದು ಭಾರಿ ಹೊನ್ನಿನ ಚೀಲವನ್ನು ಬಡವನಿಗೆ ಕೊಟ್ಟನು. ಅನಂತರ ಆ ಬಡವನ ಮಗಳನ್ನು ತಾನೇ ಮದುವೆಯಾಗಿ, ಸುಖವಾಗಿ ರಾಜ್ಯವನ್ನಾಳುತ್ತಿದ್ದನು.



# ಸೂರ್ಯ

ಕತ್ತಲೆಯ ರಾತ್ರಿ ಆಕಾಶದ ಕಡೆಗೆ ಟೆಲಿಸ್ಕೋಪಿನಿಂದ ನೋಡಿದರೆ, ನಮಗೆ ನಕ್ಷತ್ರಗಳು ಮಾತ್ರವೇ ಕಾಣುವುದಲ್ಲ; ಅಲ್ಲಲ್ಲಿ ಮೋಡಗಳಂತಹವೂ ಕಾಣಿಸುತ್ತವೆ. ಅವು ನಿಜವಾದ ಮೋಡಗಳಲ್ಲ; ಅನೇಕ ಶತಾಬ್ದಗಳಿಂದಲೂ ಅವುಗಳ ಆಕಾರವು ಮಾರ್ಪಡದೆ ಹಾಗೆಯೇ ಇರುತ್ತವೆ. ಕೆಲವು ಕೋಟಿ ಶತಾಬ್ದಗಳಿಗೆ ಆ ಮೋಡಗಳು ಘನೀಭೂತವಾಗಿ ಒಂದು ನಕ್ಷತ್ರ ಆಗುತ್ತದೆ. ನಮ್ಮ ಸೂರ್ಯನೂ ಅಂತಹ ಮಬ್ಬಿನಿಂದ ಹುಟ್ಟಿದವನೇ.

* ವಿಚಿತ್ರವೇನೆಂದರೆ, ಹಾಗೆ ಮೋಡದ ರೂಪದಲ್ಲಿರುವಾಗ ಈ ನಕ್ಷತ್ರದಲ್ಲಿ ಹೈಡ್ರೋಜನ್, ಹೀಲಿಯಂ ಎಂಬ ಅತಿ ತಿಳಿಯಾದ ವಾಯುಗಳ ಹೊರತು ಮತ್ತೇನೂ ಇರುವುದಿಲ್ಲ. ಆ ವಾಯುಗಳು ಕೂಡಾ ನಮ್ಮನ್ನು ಸುತ್ತಿಕೊಂಡಿರುವ ಗಾಳಿಗಿಂತ ಎಷ್ಟೋ ಮಡಿ ಹಗುರಾಗಿಯೂ, ತೆಳುವಾಗಿಯೂ ಇರುತ್ತವೆ. ಬಿಸಿಯೂ ಇರುವುದಿಲ್ಲ. ಆದರೆ ಈ ಮೋಡದ ಪ್ರಮಾಣವು ನಮ್ಮ ಊಹೆಗೆ ನಿಲುಕದಷ್ಟು ಹೆಚ್ಚಾಗಿರುತ್ತದೆ. ಅದರಲ್ಲಿ ನಮ್ಮ ಭೂಮಿಯನ್ನಿಟ್ಟದ್ದಾದರೆ, ಮಹಾ ಸಮುದ್ರದಲ್ಲಿ ಒಂದು ಕರಿಮಣಿ ಹಾಕಿದಹಾಗೆ!
* ಅಷ್ಟುದೊಡ್ಡ ಪ್ರಮಾಣದಲ್ಲಿರುವ ಮೋಡ ಕ್ರಮವಾಗಿ ಸಣ್ಣದಾಗುತ್ತಾ ಬರುತ್ತದೆ. ಸಣ್ಣದಾಗುತ್ತಾ ಬಂದಂತೆ ಹೆಚ್ಚುಹೆಚ್ಚಾಗಿ ಬಿಸಿಹುಟ್ಟುತ್ತಾ ಬರುತ್ತದೆ. ಭ್ರಮಣೆಯೂ ಉಂಟಾಗುತ್ತದೆ. ಒಹಳ ಹಗುರಾದ ಹೈಡ್ರೋಜನ್, ಹೀಲಿಯಂ ಅಣುಗಳು ಆ ಬಿಸಿಯಿಂದ ಒಂದಕ್ಕೊಂದು ಕೂಡಿ ಭಾರವಾದ ಇತರ ಧಾತುಗಳ ಅಣುಗಳಾಗಿ ತಯಾರಾಗುತ್ತವೆ. ಹಗುರಾದುವುಗಳು ವಾಯುರೂಪದಲ್ಲೇ ಇದ್ದು ಬಿಸಿಗೆ ಪ್ರಜ್ವಲಿಸುತ್ತವೆ.
* ಒಂದು ಮೋಡದಿಂದ ಒಂದು ನಕ್ಷತ್ರವೇ ಅಲ್ಲದೆ ಗ್ರಹಗಳೂ ಹುಟ್ಟಬಹುದು. ದ್ರವರೂಪದಲ್ಲಿ ನಕ್ಷತ್ರವು ಗೋಳಾಕೃತಿ ಹೊಂದಿದ ಮೇಲೆ ನಕ್ಷತ್ರಗರ್ಭದಿಂದ ಕೆಲವು ಧಾತುಗಳು ಮೇಲೆ ಉಕ್ಕಿ ಹೆರೆಗಟ್ಟಿ ಘನೀಭೂತವಾಗುತ್ತವೆ.
* ಕೆಲವು ವೇಳೆ ನಕ್ಷತ್ರಗರ್ಭದಿಂದ ಮೇಲೆ ಉಕ್ಕಿದ ದ್ರವವು ನಕ್ಷತ್ರದ ಮೇಲು ಭಾಗವನ್ನು ಛೇದಿಸಲೂ ಬಹುದು. ಆ ಛೇದಿಸಲ್ಪಟ್ಟ ಭಾಗವು ಮತ್ತೆ ಆ ನಕ್ಷತ್ರವನ್ನು ಸೇರದೆ ಉಪಗ್ರಹವಾಗಿ ಏರ್ಪಟ್ಟು ಅದೊಂದು ಗ್ರಹವೆನಿಸಲೂ ಬಹುದು.
* ಸೂರ್ಯನು ಹೀಗೆಯೇ ಏರ್ಪಟ್ಟ ಒಂದು ನಕ್ಷತ್ರವೇ. ಭೂಮಿ ಮತ್ತು ಇತರ ಗ್ರಹಗಳೂ ಆ ಮೋಡದಿಂದ ಬಿಡಿಬಿಡಿಯಾಗಿಯೋ ಸೂರ್ಯನಿಂದಲೋ ಹುಟ್ಟಿರಬಹುದು.
* ಗಾಳಿಗಿಂತಲೂ ಹಗುರಾದ ವಾಯುಮೇಘಗಳಿಂದ ಸೂರ್ಯನಂತಹ ದೇದೀಪ್ಯಮಾನವಾದ ನಕ್ಷತ್ರಗಳೂ, ಭೂಮಿಯಂತಹ ಗ್ರಹಗಳೂ, ಅವುಗಳೊಂದಿಗೆ ಅನೇಕ ಧಾತುಗಳೂ, ಅವುಗಳಿಂದ ಏರ್ಪಟ್ಟ ಬಹುವಿಧ ಪದಾರ್ಥಗಳೂ, ಅವುಗಳಿಂದ ಹುಟ್ಟಿಕೊಂಡ ಚರಾಚರ ಜೀವಕೋಟಿಗಳೂ,—ಇವನ್ನೆಲ್ಲಾ ನೆನೆಯುವಾಗ ದೇವರ ಮಾಯೆ ಎಷ್ಟು ಘನವಾದುದೋ ಎನಿಸುತ್ತದಲ್ಲವೇ! ಅಗಾಧವೇಸರಿ!

## ಚುಟುಕಗಳು

ಅಕ್ಕಿಯ ಗಂಜಿ
ಪರಿಮಳ ತುಪ್ಪ
ಉಪ್ಪಿನಕಾಯಿ
ಸರಭರ ಸರಭರ
ಗಂಜಿಯ ಊಟ.

* * *

ಬಾರೆ ಮುದ್ದು ದನವೆ
ಹುಲ್ಲು ನೀರು ಕೊಡುವೆ
ಒಳ್ಳೇ ಹಾಲ ಕೊಡುವಿ,
ನಾನು ಹಾಲು ಕುಡಿವೆ.

* * *

ಮಂಗು ಬೆಕ್ಕೆ ಬಾರೆ
ಮುದ್ದು ನಿನ್ನ ಮೇರೆ
ಬುಸ್ಸು ಉಗುರು ತೋರಿ
ಇಲಿಯ ಮೇಲೆ ಹಾರೆ!

* * *

ತೋಟದೊಳಗೆಲ್ಲಾ ಒಂದೇ ಮಣ್ಣು,
ಬಗೆಬಗೆ ರುಚಿಗಳ ಹಣ್ಣು
ದೇವರಮಾಟ, ವಿಚಿತ್ರದಾಟ
ದೇವರಿಗರ್ಪಿಸಿ ತಿನ್ನು.

* * *

ಊರಿಗೊಂದು ವಾರಕೊಮ್ಮೆ
ಸೇರುವಂಥ ಸಂತೆ
ಸುತ್ತುಮುತ್ತಲಿಂದ ಭಾಳ
ವಸ್ತುಬರುವ ಸಂತೆ.

"ತಿಮ್ಮ"

## ತುಂಡು ಪದ್ಯಗಳು

ಆಳಾದ ಬಾವೀಲಿ
ಮೇಲಾದ ನೀರುಂಟು
ಹಾಳಾದ ನೀರ ಕುಡಿಬ್ಯಾಡೋ
ನನಕಂದ—
ಸೀಯಾಳ ಕುಡಿಯೊ ಬಾ ಅಂತು.
ಆ ತೆಂಗು—
ಸೀಯಾಳ ಕುಡಿಯೊ ಬಾ ಅಂತು.

* * *

ನಮ್ಮ ರಾಮಣ್ಣನಾ
ಮದುವೆಯಾ ದಿಬ್ಬಣ
ಚೆನ್ನಪ್ಪ ಗಾಡಿ ಕಟ್ಯಾನೋ
ಗಾಡೀಲಿ—
ಪೇಟೆ ಸಾಮಾನು ತಂದಾನೋ
ಬಸವಣ್ಣ—
ಗಣಾಗಣಾ ದಿಬ್ಬ ಪೊಯಿದಾನೋ.

* * *

ಮುಂಜಾನೆ ಹುಂಜಣ್ಣ
ಕೊಕ್ಕೊರೋಕೋ ಎಂದ
ರೈತ ನಿದ್ದೆಯಬಿಟ್ಟು ಕೆಲಸಕೆದ್ದ
ಹಕ್ಕಿ ಚಿಲಿಬಿಲಿಮಾಡಿ
ಕಾಗೆ ಕಾಕಾ ಕೂಗಿ
ಬೆಳ್ಳಗೇ ಬೆಳಗಾಗೆ-ಸೂರ್ಯ ಎದ್ದ.

* * *

ಬಾರೋ ಕಬ್ಬು ತಿನ್ನು ಎಂದರೆ
ಕಬ್ಬು ತಿನ್ನಲು ಕೂಲಿ ಕೇಳ್ತಾನೆ.
ಸೋಮಾರಿ ರಾಮು—
ನೀರು ಕುಡಿಯಲು ಕಾಸು ಕೇಳ್ತಾನೆ.

"ಸುಂದರಿ"

# ಮಾಯಾಚಕ್ರ (ಹಿಂಬದಿಯ ಚಿತ್ರಕಥೆ-೬)

ಕುದುರೆಯ ಮೇಲಿನಿಂದ ಕೆಳಗಿಳಿಯುತ್ತಲೇ ರಾಣಿ—"ಅಶ್ವರಾಜಾ, ನೀನು ಇನ್ನೂ ನನಗೆ ಉಪಕಾರಮಾಡಬೇಕು ದಯವಿಟ್ಟು" ಎಂದು ಕೇಳಿಕೊಂಡಳು.

ಅದಕ್ಕೆ ಕುದುರೆ—"ಅಮ್ಮ, ಈ ಕೆಂಪುಕೋಟೆ ದೇವಲೋಕಕ್ಕೆಕೂಡಾ ಕಾಣಿಸುತ್ತಿರುವುದರಿಂದ, ಇಲ್ಲಿಯ ಕೆಂಪು ರತ್ನ ಮೊಹರಿಗಳನ್ನು ತರಲು ದೇವತೆಗಳು ನನ್ನನ್ನು ಕಳುಹಿಸುತ್ತಾರೆ. ನಾನು ಬರುವುದೂ ಹೋಗುವುದೂ ಇಲ್ಲಿರುವ ರಾಕ್ಷಸಿಗೆ ತಿಳಿಯುವುದಿಲ್ಲ. ಈಗ ಗೊತ್ತಾದರೆ ಕಷ್ಟವಲ್ಲವೆ?" ಎಂದಿತು.

"ಅದಕ್ಕೆಲ್ಲಾ ತಕ್ಕ ಉಪಾಯ ನಾನು ಮಾಡುತ್ತೇನೆ. ನಾಳಿನವರೆಗೂ ನೀನು ಇಲ್ಲೇ ಇರು" ಎಂದಳು ರಾಣಿ.

ಆಗಲೇ ಕೋಟೆಯೊಳಗಿನಿಂದ ರಾಕ್ಷಸಿ ಬಂದು ರೆಕ್ಕೆಯಕುದುರೆಯನ್ನು ನೋಡಿ ಆಶ್ಚರ್ಯಪಟ್ಟಳು.—"ಯಾರಮ್ಮಾ ನೀನು? ಏಕೆ ಬಂದಿ? ಯಾರದೀ ಕುದುರೆ?" ಎಂದು ಪ್ರಶ್ನೆಯ ಮಳೆ ಸುರಿಸಿದಳು.

ರಾಣಿ ಧೈರ್ಯದಿಂದ—"ಅಮ್ಮ, ನಾನೊಬ್ಬಳು ಮಂತ್ರವಾದಿನಿ. ಮಂತ್ರ ಬಲದಿಂದ ಈ ದೇವಕುದುರೆಯನ್ನು ವಶಮಾಡಿಕೊಂಡು ದೇಶಸಂಚಾರ ಮಾಡುತ್ತ ಬಂದೆ. ಈ ಕೋಟೆ ವಿಚಿತ್ರವಾಗಿ ತೋರಿತು. ಇಲ್ಲಿ ಇಳಿದೆ" ಎಂದು ಹೇಳಿದಳು.

ರಾಕ್ಷಸಿ ಅವಳನ್ನು ಆದರಿಸಿ ಒಳಕ್ಕೆ ಕರೆದೊಯ್ದಳು. ಅವಳನ್ನು ಬಹಳ ಮರ್ಯಾದೆಯಿಂದ ಅಂತಃಪುರಕ್ಕೆ ಕರೆದೊಯ್ದು ತನ್ನ ಕುರೂಪಿಯಾದ ಮಗಳನ್ನು ತೋರಿಸಿ ಹೀಗೆಂದಳು: "ನೋಡೇ ಮಂತ್ರವಾದಿನಿ, ಇವಳು ನನ್ನ ಮಗಳು. ಇವಳಿಗೆ ಮದುವೆಮಾಡಿಸಲಿಕ್ಕಾಗಿ ನಾನೊಬ್ಬ ರಾಜನನ್ನು ತಂದಿದ್ದೇನೆ. ಇತರ ಸ್ತ್ರೀಯರು ಅವನನ್ನು ವರಿಸಲಾರದಂತೆ ಅವನ ತಲೆ ಕತ್ತೆತಲೆಯನ್ನಾಗಿ ಮಾಡಿಬಿಟ್ಟಿದ್ದೇನೆ. ಆದರೆ ನನ್ನ ಶತ್ರುವಾದ ದೇವತೆಯೊಬ್ಬಳು ಅನುರಾಗವುಳ್ಳ ಪತ್ನಿಯಿಂದ ಅವನ ಶಾಪ ಹೋಗುವುದೆಂದು ವರಬೇರೆ ಕೊಟ್ಟಿದ್ದಾಳೆ. ನನ್ನ ಮಗಳಿಗೆ ಅವನಮೇಲೆ ತುಂಬಾ ಅನುರಾಗವಿದೆ. ಅವನಿಗೆಮಾತ್ರ ಇವಳ ಮೇಲೆ ಇಷ್ಟವಿಲ್ಲ. ನೀನು ನಿನ್ನ ಮಹಿಮೆಯಿಂದ ಅವನಿಗೆ ಇವಳಮೇಲೆ ಇಷ್ಟಬರುವಂತೆ ಮಾಡಬಲ್ಲೆಯಾ?" ಎಂದು ಕೇಳಿದಳು.

"ಓ ಅದಕ್ಕೇನು ಮಹಾ! ಇಕೋ ನೋಡು. ನನ್ನ ಮಂತ್ರದ ಮಹಿಮೆ" ಎಂದು ರಾಣಿ ಹೇಳಲು ರಾಕ್ಷಸಿಗೆ ಆಶ್ಚರ್ಯವೂ ಆನಂದವೂ ಒಂದೇಬಾರಿಗೆ ಉಂಟಾಯಿತು. ರಾಕ್ಷಸಿಯ ಮಗಳೂ ಆನಂದದಿಂದ ಉಬ್ಬಿದಳು.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಜೂನ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಏಪ್ರಿಲ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಆವರಣದಲ್ಲಿ

ಎರಡನೇ ಫೋಟೋ: ವಾತಾವರಣದಲ್ಲಿ

ಕಳಿಸಿದವರು: ಚನ್ನಬಸಪ್ಪ, ಗುರುಬಸಪ್ಪ, ಭೂಸನೂರ

C/o ಜಿ.ಸಿ. ಭೂಸನೂರ, ಪ್ಲೀಡರ್, ಹೊಸೂರು. ಹುಬ್ಬಳ್ಳಿ.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

ಕಳೆದ ಜನವರಿಯಲ್ಲಿ ಜರುಗಿದ ಆವಡಿ ಕಾಂಗ್ರೆಸ್ಸಿನಲ್ಲಿ ಪಂಡಿತ ಜವಹರಲಾಲನೆಹರು ರವರನ್ನು ನೋಡಲಿಕ್ಕಾಗಿಯೇ ಜನ ಸಾಮಾನ್ಯರು ಬಹಳವಾಗಿ ಬಂದಿದ್ದರು. ಅವರೊಳಗೆ ಆಂಧ್ರದಿಂದ ಬಂದಿದ್ದ ಹೆಂಗುಸೊಬ್ಬಳು ನೆಹರುರವರಿಗಾಗಿ ತಯಾರಿಸಿದ ಎರಡು ಸಾವಿರ ರೂಪಾಯಿಯಷ್ಟು ಬೆಲೆ ಬಾಳುವ ಕಿರೀಟವೊಂದನ್ನು ಎತ್ತಿಕೊಂಡು ಬಂದು ನೆಹರುರವರಿಗೆ ಸಮರ್ಪಣೆಮಾಡಿದ್ದು ವಿಶೇಷ ಕೌತುಕವಾಗಿದೆ.

*　*　*

ಕಳೆದ ಫಿಬ್ರವರಿಯಲ್ಲಿ, ಹುಬ್ಬಳ್ಳಿಯಲ್ಲಿ ಕುರುಡರ ಶಿಕ್ಷಣಶಾಲೆ ಪ್ರಾರಂಭವಾಗಿದೆ. ಇದು ಬೊಂಬಾಯಿ ಸರಕಾರದ ನಿರ್ವಹಣೆಯಲ್ಲಿ ಪ್ರಾರಂಭಿಸಲಾಗಿದೆ. ೭ ರಿಂದ ೧೭ ವಯಸ್ಸಿನ ಕುರುಡರನ್ನು ಆ ಶಾಲೆಯಲ್ಲಿ ತೆಗೆದುಕೊಳ್ಳುವರು.

ಭಾರತದಲ್ಲಿ 'ಶಾರದಾ ಬಿಲ್ಲಿ'ನ ಪ್ರಯೋಗ ಮಾಡಿ, ಅದರ ಜನಕರೆನಿಸಿದ ಶ್ರೀ ಹರಿವಿಲಾಸ ಶಾರದಾರವರು, ಕಳೆದ ಜನವರಿ ತಿಂಗಳು ೨೦ ರಂದು ತಮ್ಮ ೮೮ ನೇ ವಯಸ್ಸಿನಲ್ಲಿ ನಿಧನರಾದರು.

*　*　*

ನವದೆಹಲಿಯಲ್ಲಿ ಮಕ್ಕಳ ಚಲಚ್ಚಿತ್ರ ಉತ್ಸವವನ್ನು ಜರುಗಿಸಿದ ಶ್ರೀಮತಿ ಇಂದಿರಾ ಗಾಂಧಿಯವರಿಗೆ, ತಮಗೆ ಎಂತಹ ಚಿತ್ರಗಳು ಬೇಕು ಎಂಬ ಬಗ್ಗೆ ಹಲವು ಕಿರಿಯರೇ ಕಾಗದ ಬರೆದು ಸೂಚಿಸಿದ್ದಾರಂತೆ. ತಂತಿಯಿಲ್ಲದೆ ಸುದ್ದಿ ಕಳಿಸುವುದು, ಚಂದ್ರನ ಬಳಿಗೆ ಹೋಗುವುದು, ತಂದೆತಾಯಿಗಳು ಮಕ್ಕಳನ್ನು ಹೊಡೆಯದೆ ಬಯ್ಯದೆ ಇರುವುದು, ಹೆತ್ತವರಿಗೆ ಮಕ್ಕಳನ್ನು ಪ್ರೀತಿ ಮಾಡುವ ರೀತಿಯನ್ನು ಕಲಿಸುವುದು, ಇವೇ ಮುಂತಾದ ಅನೇಕ ಬಗೆಯ ಸೂಚನೆಗಳು ಅವುಗಳಲ್ಲಿ ಇವೆಯಂತೆ.



**ಚೈ**ತ್ರಪ್ರಸಿದ್ಧವಾದ 'ಸಿಪಾಯಿದಂಗೆ' ಎಂಬ ಹೆಸರಿನ ಮೊದಲನೆಯ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ಬರೆಯಲು ಪ್ರಸಿದ್ಧ ಇತಿಹಾಸಜ್ಞರಾದ ಡಾ. ಎಸ್. ಸೇನರನ್ನು ಕೇಳಿಕೊಳ್ಳಲಾಗಿದೆ ಎಂದು ಭಾರತಸರಕಾರದ ಶಿಕ್ಷಣಮಂತ್ರಿಗಳಾದ ಆಜಾದರು ತಿಳಿಸಿದ್ದಾರೆ. ಆ ಪುಸ್ತಕವನ್ನು ಸ್ವಾತಂತ್ರ್ಯಸಂಗ್ರಾಮದ ನೂರನೇ ದಿನ ೧೯೫೭ ಮೇ ೧೦ ಕ್ಕೆ ಪ್ರಕಟಿಸುವ ವಿಚಾರವಿದೆಯೆಂದೂ ಗೊತ್ತಾಗುತ್ತದೆ.

* * *

**ಬೆಂ**ಗಳೂರಿನ ವಯೋವೃದ್ಧರೂ ಪ್ರಸಿದ್ಧ ಶಿಲ್ಪಕಳಾನಿಪುಣರೂ ಆದ ಸರ್ ಎಮ್. ವಿಶ್ವೇಶ್ವರಯ್ಯನವರಿಗೆ ಕಳೆದ ಪ್ರಜಾರಾಜ್ಯ ದಿನೋತ್ಸವದ ಕಾಲದಲ್ಲಿ 'ಭಾರತರತ್ನ' ಎಂಬ ಪ್ರಶಸ್ತಿ ಕೊಡಲ್ಪಟ್ಟಿದೆ.

* * *

**ಪೋ**ರಬಂದರದ ಬಳಿ ಮಾಧವಪುರ ಎಂಬ ಗ್ರಾಮದಲ್ಲಿ ರುಡಿಮಾ ಎಂಬ ಅಶಿಕ್ಷಿತ ಮುದುಕಿಯೊಬ್ಬಳು ಸುಮಾರು ೩೦ ವರ್ಷಗಳಿಂದ ಅನಭಿಷಿಕ್ತ ರಾಣಿಯಂತೆ ಇದ್ದಾಳೆ. ಯಾವ ನ್ಯಾಯ ಜಗಳಗಳನ್ನೂ ಅವಳು ಕೋರ್ಟಿಗೆ ಬಿಡದೆ ತೀರ್ಪುಕೊಡುತ್ತಿದ್ದಾಳೆ. ಬೆಳಗ್ಗಿನಿಂದ ಸಂಜೆಯ ವರೆಗೆ ಹಳ್ಳಿಯ ಎಲ್ಲಾ ಕಡೆಗೆ ತಿರುಗುತ್ತಾಳೆ. ಗಂಡುಸು, ಹೆಂಗುಸರೊಡನೆ ಚರ್ಚಿಸಿ ಅವರಿಗೆ ಯೋಗ್ಯ ದರ್ಶನ ಕೊಡುತ್ತಾಳೆ; ಸಹಾಯ ಒದಗಿಸುತ್ತಾಳೆ. ಹಾಲು ಮೊಸರು ಮೊದಲಾದ ವ್ಯಾಪಾರ ಮಾಡುವ ಹೆಂಗುಸರಿಗೆ ತಕ್ಕ ಸಂರಕ್ಷಣೆಯನ್ನೋ, ಪರಾಮರಿಕೆಯನ್ನೋ ಮಾಡುತ್ತಾಳೆ. ಅವಳ ಅನುಮತಿಯಿಲ್ಲದೆ ಅಲ್ಲಿ ಲಗ್ನ ಕೂಡ ನಡೆಯುವುದಿಲ್ಲ. ಅಲ್ಲಿಯ ಪಂಚಾಯತಿಯಲ್ಲಿ ರುಡಿಮಾ ಒಬ್ಬ ಸದಸ್ಯಳು. ಅವಳ ಮನಸ್ಸನ್ನು ನೋಯಿಸುವಂತೆ ಆ ಹಳ್ಳಿಯಲ್ಲಿ ಯಾರೂ ನಡೆದುಕೊಳ್ಳುವುದೇ ಇಲ್ಲ. ಹಾಗೆ ನಡೆದುಕೊಳ್ಳುವ ಧೈರ್ಯ ಯಾರಿಗೂ ಬರುವುದಿಲ್ಲವಂತೆ!

* * *

**ಅ**ಹಮ್ಮದ್‌ನಗರ ಜಿಲ್ಲೆಯಲ್ಲಿ ಪರಮಾ ನದಿಯ ತಳದಲ್ಲಿ ಶಿಲಾಯುಗದ ಉಪಕರಣಗಳನ್ನು ಪೂನಾದ ಡೆಕ್ಕನ್ ಕಾಲೇಜಿನ ಸಂಶೋಧಕರು ಕಂಡುಹಿಡಿದಿದ್ದಾರೆ.

* * *

**ಭಾ**ರತೀಯರಿಗೆಲ್ಲಾ, ಚೀಣಿಯರ ಸೌಹಾರ್ದತೆಯ ಕಾಣಿಕೆಯೆಂದು ಚೀಣದ ಪ್ರಧಾನರಾದ ಚೌ-ಎನ್-ಲಾಯ್‌ರವರು ೧೫೦೦ ತೊಲೆ ರೇಶಿಮೆಯ ಗೂಡುಗಳನ್ನು ಕಳುಹಿಸಿರುತ್ತಾರಂತೆ.



# ಚಿತ್ರ ಕಥೆ



ವಾಸು, ಗೋಪಿಯರು ಒಂದು ದಿನ ತೋಟಕ್ಕೆ ಹೋಗಿ ಸೌತೇಕಾಯಿ ಕೊಯ್ದು ಚೀಲ ತುಂಬಿಕೊಂಡರು. ಸಂಚಿ ತುಂಬಿ ಒಂದು ಕಾಯಿ ಹೆಚ್ಚಾಯಿತು. "ಇದನ್ನ ಮೂಗಿನಮೇಲಿಟ್ಟುಕೊಂಡು ಯಾರು ಕಾಲುವೆ ದಾಟುತ್ತಾರೋ ಅವರೇ ತಿನ್ನಬೇಕು" ಎಂದ ವಾಸು. "ನೀನೇ ಮೊದಲು ದಾಟಂತೆ" ಎಂದ ಗೋಪಿ.




ವಾಸು ಮೂಗಿನಮೇಲೆ ಸೌತೇಕಾಯಿ ಇಟ್ಟುಕೊಂಡು ಮೇಲೆ ನೋಡುತ್ತಾ ಕಾಲುವೆ ದಾಟ ತೊಡಗಿದ. ದಾಟುವಾಗ ಜಾರಿ, ವಾಸು ಕಾಲುವೆಯ ಕೊಳೆ ಕೆಸರಿನಲ್ಲಿ! ಸೌತೇಕಾಯಿ ಇನ್ನೊಂದು ಕಡೆಯಲ್ಲಿ!!— "ಬಡಾಯಿಖೋರರಿಗೆ ಇದೇ ಗತಿ" ಎಂದು ನೆಗಾಡಿದ ಗೋಪಿ—ಅವನೇನೋ ಮಹಾ ಒಳ್ಳೆಯವನ ಹಾಗೆ!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by B. Bhansali



ಬಹುಮಾನ
ಪಡೆದ ಶೀರ್ಷಿಕೆ

ವಾತಾವರಣದಲ್ಲಿ

ಕಳಿಸಿದವರು :
ಚನ್ನಬಸಪ್ಪ, ಗುರುಬಸಪ್ಪ

